# The
# Karnataka Bhagavadgita

ನಾಗರಸಕವಿಯಿಂದ ವಿರಚಿತವಾದ

# ಕರ್ಣಾಟಕ ಭಗವದ್ಗೀತೆ


ಮೈಸೂರು ವಿದ್ಯಾಭ್ಯಾಸದ ಇಲಾಖೆಯ ರಿಟೈರ್ಡ್ ಸರ್ಕಲ್ ಇನ್ಸ್ಪೆಕ್ಟರ್

**ಮ. ಶ್ರೀನಿವಾಸರಾವ್, ಬಿ. ಎ.**

ಯವರಿಂದ ಮುದ್ರಾಪಿಸಲ್ಪಟ್ಟುದು.





(Second Edition 1000 Copies)



EDITED BY

**M. SRINIVASA RAO, B.A.**

Retired Circle Inspector of Education





**1936**

Price As. 12.] [ಕ್ರಯ ೧೨ ಆಣೆ

# ಪ್ರಥಮ ಮುದ್ರಣದ ಪೀಠಿಕೆ.

ಸಾಕ್ಷಾತ್ಪರಮಾತ್ಮನಾದ ಶ್ರೀಕೃಷ್ಣನು ಸಂಸಾರ ಸಮುದ್ರದಲ್ಲಿ ಮುಳುಗಿರುವ ಜನಗಳನ್ನು ಉದ್ಧರಿಸಬೇಕೆಂದು, ಶೋಕಮೋಹಗಳಿಂದಾಕ್ರಾಂತನಾದ ಅರ್ಜುನನನ್ನು ಉದ್ದೇಶಿಸಿ, ಪ್ರವೃತ್ತಿನಿವೃತ್ತಿ ಲಕ್ಷಣವಾದ ಧರ್ಮವನ್ನು ಉಪದೇಶಿಸಿದನು. ಈ ಉಭಯಾತ್ಮಕವಾದ ಧರ್ಮವು ಗುಣಗ್ರಾಹಿಗಳಾದವರಿಂದ ಆಚರಿಸಲ್ಪಟ್ಟರೆ. ವೃದ್ಧಿಯನ್ನು ಪಡೆಯುವುದೆಂಬ ಉದ್ದೇಶದಿಂದ ಇದನ್ನು ಒಂದು ಶಾಸ್ತ್ರವನ್ನಾಗಿ ಸರ್ವಜ್ಞರಾದ ವೇದವ್ಯಾಸರು ೭೦೦ ಸಂಸ್ಕೃತಶ್ಲೋಕಗಳಿಂದ ರಚಿಸಿದರು. ಸಮಸ್ತ ವೇದಾರ್ಥಸಾರಸಂಗ್ರಹಭೂತವಾದ ಈ ಗೀತಾಶಾಸ್ತ್ರವು ಸಂಸ್ಕೃತದಲ್ಲಿ ವಿಶೇಷವಾಗಿ ಪಾಂಡಿತ್ಯವುಳ್ಳವರಿಗೆ ಮಾತ್ರವೇ ತಿಳಿಯಲು ಸಾಧ್ಯವಾದುದರಿಂದ ಇದನ್ನು ಸಾಮಾನ್ಯರಾದವರಿಗೂ ಯಥಾಯೋಗ್ಯವಾಗಿ ತಿಳಿಯಲು ಅನುಕೂಲವಾಗಿರುವಂತೆ ಕಾಶ್ಯಪಗೋತ್ರೋದ್ಭವನಾದ ನಾಗರಸನೆಂಬ ಕರ್ಣಾಟಕ ಪ್ರಾಚೀನಕವಿಯು ಕನ್ನಡಕ್ಕೆ ಷಟ್ಪದೀಕಾವ್ಯರೂಪವಾಗಿ ಪರಿವರ್ತಿಸಿದನು. ಈ ಕರ್ಣಾಟಕ ಭಗವದ್ಗೀತೆಯಲ್ಲಿ ಸಂಸ್ಕೃತಭಗವದ್ಗೀತೆಯ ಒಂದೊಂದು ಶ್ಲೋಕದ ತಾತ್ಪರ್ಯವು ಒಂದೊಂದು ಷಟ್ಪದಿಯಲ್ಲಿ ವಿಶದವಾಗಿ ಹೇಳಲ್ಪಟ್ಟಿರುವುದು. ಈ ಕವಿಯು ದುರವಗಾಹವಾದ ಭಗವದ್ಗೀತೆಯ ತಾತ್ಪರ್ಯವನ್ನು ಕನ್ನಡದಲ್ಲಿ ಸಾಧ್ಯವಾದಮಟ್ಟಿಗೆ ಸುಲಭಮಾರ್ಗದಿಂದ ತಿಳಿಯಿಸಿರುವನು. ಈ ಪ್ರಕಾರವಾಗಿ ರಚನೆ ಮಾಡುವಾಗ ಒಂದೊಂದು ಪದ್ಯದಲ್ಲಿ ಸುಲಭವಾಗಿ ತಾತ್ಪರ್ಯಸ್ಫೂರ್ತಿಯಾಗುವುದಕ್ಕೋಸ್ಕರ ಕೆಲವು ಶಿಥಿಲೋಚ್ಚಾರಣೆಯ ಸಂಯುಕ್ತಾಕ್ಷರಗಳನ್ನು ಪ್ರಯೋಗಿಸಿರುವನು. ಇದು ಛಂದಶ್ಶಾಸ್ತ್ರಕ್ಕೆ ವಿರುದ್ಧವಾದರೂ ತಾತ್ಪರ್ಯಗೌರವದಲ್ಲಿ ದೃಷ್ಟಿಯಿಡತಕ್ಕ ಪಂಡಿತರು ಇದೊಂದು ದೋಷವೆಂದು ಭಾವಿಸಲಾರರು. ಈ ಗ್ರಂಥದ ಪುರಾತನವಾದ ಒಂದು ಪ್ರತಿಯು ಈಗ ಕೆಲವು ದಿವಸಗಳ ಹಿಂದೆ ನನಗೆ ದೊರಕಿತು. ಅದನ್ನು ನೋಡಿ ನಾನು ಇಂತಹ ಉತ್ತಮ ಗ್ರಂಥವು ಮುದ್ರಿತವಾಗದೆಯೂ ಪ್ರಚಾರದಲ್ಲಿ ಇಲ್ಲದೆಯೂ ಶಿಥಿಲವಾಗುತ್ತಿರುವುದು ಸರಿಯಾದುದಲ್ಲವೆಂದು ಪರ್ಯಾಲೋಚಿಸಿ ಇದನ್ನು ಬಹುಕಾಲ ಶೋಧನೆಯುಲ್ಲಿಟ್ಟುಕೊಂಡಿದ್ದು ಸರ್ವಜನಕ್ಕೂ ಉಪಯುಕ್ತವಾಗುವಂತೆ ಈಗ ಮುದ್ರಾಪಿಸಿರುವೆನು. ಈಗ್ರಂಥವನ್ನು ಶ್ರೀಮನ್ಮಹಾರಾಜರವರ ಆಸ್ಥಾನ ಮಹಾವಿದ್ವಾಂಸರಾದ ವೇ|| ಸೋಸಲೆ ಅಯ್ಯಾಶಾಸ್ತ್ರಿಗಳು ಆದ್ಯಂತವಾಗಿ ಪರಿಶೋಧಿಸಿ ಮುದ್ರಣಕ್ಕೆ ಅನುಕೂಲವಾಗುವಂತೆ ಮಾಡಿದುದಕ್ಕಾಗಿ ಇವರಿಗೆ ನಾನು ತುಂಬಾ ಕೃತಜ್ಞನಾಗಿರುವೆನು.

ಮೈಸೂರು,
ತಾ|| 1 ನೇ ಡಿಶಂಬರು 1908.

ಮ. ಶ್ರೀನಿವಾಸರಾವ್, ಬಿ. ಎ.

# ದ್ವಿತೀಯ ಮುದ್ರಣದ ಪೀಠಿಕೆ

ಈ ಗ್ರಂಥವು ಮೊದಲನೆಯ ಸಲ ಛಾಪಿಸಿದ ಪ್ರತಿಗಳೆಲ್ಲವೂ ಮುಗಿದುದರಿಂದ ಈಗ ಎರಡನೆಯ ಆವರ್ತಿ ಆಧುನಿಕ ರೀತಿಯನ್ನು ಅನುಸರಿಸಿ ಉತ್ತಮವಾದ ಕಾಗದದಲ್ಲಿ ಮೊದಲಗಿಂತಲೂ ಅಂದವಾಗಿಯೂ, ಸ್ಫುಟವಾಗಿಯೂ, ಮುದ್ರಿಸಿರುತ್ತದೆ.

ಇದರಿಂದ ಈ ಗ್ರಂಥದಲ್ಲಿ ಪ್ರಥಮ ಮುದ್ರಣದ ಒಂದೂವರೆಯಷ್ಟು ಹೆಚ್ಚು ಪುಟಗಳಿದ್ದರೂ ಸರ್ವಜನ ಸಾಮಾನ್ಯರಿಗೂ ಸುಲಭವಾಗಿ ದೊರೆಯಲೆಂದು ಬೆಲೆಯನ್ನು ಒಂದು ರೂಪಾಯಿನಿಂದ ಹನ್ನೆರಡಾಣೆಗೆ ತಗ್ಗಿಸಿರುತ್ತದೆ.

ತಮಗೆ ಅನೇಕ ಕಾರ್ಯಗಳಿದ್ದರೂ, ಈ ಪುಸ್ತಕವನ್ನು ಮುದ್ರಾಪಿಸಿ ಕೊಡಬೇಕೆಂದು ನಾನು ಕೇಳಿದೊಡನೆಯೇ ಉತ್ಸಾಹದಿಂದ ಮುಂದೆ ಬಂದು ಗ್ರಂಥಪರಿಶೋಧನೆಯೇ ಮೊದಲಾದ ಅನುಕೂಲಗಳನ್ನು ಮಾಡಿ ನೆರವಾದುದಕ್ಕಾಗಿ ಜ್ಞಾನಗುಣಾಕರ, ಉಪನಿಷದ್ರತ್ನಾಕರ, ವಿದ್ಯಾರ್ಣವ, ತತ್ವಚಿಂತಾಮಣಿ ವಾಙ್ಮಯಮಹೋದಧಿ, ಪ್ರಾಚ್ಯವಿದ್ಯಾಮಹಾರ್ಣವ, ಇತ್ಯಾದಿ ಬಿರುದಾಂಕಿತರಾದ ಪಂಡಿತ ಶ್ರೀಮಾನ್, ಚೀಮನಹಳ್ಳಿ ರಘುನಾಥಾಚಾರ್ಯರಿಗೆ ನಾನು ತುಂಬ ಕೃತಜ್ಞನಾಗಿದೇನೆ.

ಸರ್ವರೂ ಈ ಪುಸ್ತಕದ ಪ್ರತಿಯನ್ನು ಸಂಗ್ರಹಿಸಿ, ಪಠನೆಮಾಡಿ, ಅದರಿಂದಾಗುವ ಅತಿಶಯಾನಂದಾದಿ ಫಲಗಳಿಗೆ ಭಾಗಿಗಳಾಗುವರೆಂದು ನಂಬುತ್ತೇನೆ

ಮೈಸೂರು
ತಾ|| 5 ನೇ ಮಾರ್ಚಿ 1936

ಮ. ಶ್ರೀನಿವಾಸರಾಯರು.

# ಶುದ್ಧಾಶುದ್ಧಪತ್ರಿಕೆ

| ಪುಟ | ಪದ್ಯ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|---|
| ೮ | ೨೨ | ೬ | ಕಪಿಜಧ್ವ | ಕಪಿಧ್ವಜ |
| ೧೫ | ೪೮ | ೪ | ಸಖವೆಂ | ಸುಖವೆಂ |
| ೧೮ | ೧೦ | ೧ | ಅಪಧರಿಸು | ಅವಧರಿಸು. |
| ,, | ,, | ೨ | ಕೇಶವರು | ಕೇಶವನು |
| ,, | ,, | ೪ | ಇವನು | ಇವನ |
| ೨೨ | ೨೬ | ೫ | ಕೊಡುವ | ಕೂಡುವ |
| ೨೪ | ೩೨ | ,, | ಪಡೆದರಿದು | ಪಡೆವರಿದು |
| ೩೧ | ೬೨ | ೬ | ಹೋದನು | ಹೋಹನು |
| ೩೪ | ೨ | ,, | ಬೆದಸು | ಬೆಸಸು |
| ೩೬ | ೯ | ೨ | ಕರ್ಪುದ | ಕರ್ಮದ |
| ೪೦ | ೨೫ | ,, | ಫಲವೇ | ಫಲರವೇ |
| ೪೨ | ೩೩ | ೫ | ಧಾನಿದಿಂ | ಧಾನದಿಂ |
| ೪೫ | ೧ | ೩ | ಮಸವಿಂಗೆ | ಮಸುವಿಂಗೆ |
| ,, | ,, | ೫ | ತಾನಿಕ್ಷ್ಯಾ | ತಾನಿಷ್ವಾ |
| ೪೮ | ೧೨ | ೬ | ಸಿದ್ಟಿಪುದು | ಸಿದ್ಧಿಪುದು |
| ೫೧ | ೨೬ | ೨ | ಶೋತ್ರಾದಿಗಳು | ಶ್ರೋತ್ರಾದಿಗಳ |
| ೬೯ | ೨೨ | ೩ | ಸೌಖ್ಯವನು | ಸೌಖ್ಯದಲಿ |
| ೯೮ | ೨೬ | ೧ | ನೆರನೊಬ್ಬನು | ಆವನೊಬ್ಬನು |
| ೧೧೨ | ೧ | ೧ | ಕೇಳಿಸ | ಕೇಳಿಲೆ |
| ೧೧೬ | ೧೯ | ,, | ಹುತಾಶವನದ | ಹುತಾಶವದನದ |
| ೧೨೯ | ೧೨ | ೨ | ಸುಜ್ಞಾ ವದರಿ | ಸುಜ್ಞಾನವದರಿಂ |
| ,, | ೧೩ | ೪ | ದುಃಜದ | ದುಃಖದ |
| ೧೩೭ | ೨೩ | ೬ | ಸ್ರೈ | ಸನ್ರೈ |
| ೧೪೨ | ೬ | ೨ | ಕದದಿಂ | ಕತದಿಂ |
| ೧೪೯ | ೫ | ೫ | ತುಂವಿ | ತುಂಗವಿ |
| ೧೫೧ | ೧೩ | ೬ | ನುತಿಹೆ | ಸುತಿಹೆ |
| ೧೭೦ | ೪ | ೩ | ನೀನೊಸಿದು | ನೀನೊಲಿದು |
| ೧೮೨ | ೫೪ | ೨ | ನಿರ್ಮತೆ | ನಿರ್ಮರುತೆ |
| ೧೮೫ | ೬೭ | ೧ | ಪೇರ್ದೀ | ಪೇಳ್ದೀ |
| ೧೮೭ | ೭೪ | ೬ | ಕೇರ್ನೀ | ಕೇಳ್ವೀ |
| ೧೮೮ | ೭೯ | ೧ | ಜಯಮೇಜಯ | ಜನಮೇಜಯ. |

# ಕರ್ಣಾಟಕ ಭಗವದ್ಗೀತೆ.



## ಭಾಮಿನೀ ಷಟ್ಪದಿ.

### ॥ ಪೀಠಿಕಾ ಸಂಧಿ ॥



ಶ್ರೀಲಲಿತ ಶುಭಗಾತ್ರ ವಿಕಸಿತ
ಲೋಲಸರಸಿಜನೇತ್ರ ವರಮುನಿ
ಜಾಲಸನ್ನುತಿಪಾತ್ರ ಸರ್ವೇಶ್ವರ ಸುಚಾರಿತ್ರಾ |
ಶೈಲಜಾಪ್ರಿಯನಾಮ ಪೃಥ್ವೀ
ಪಾಲ ವಂಶಲಲಾಮ ರಾಜಿತ
ನೀಲಮೇಘಶ್ಯಾಮ ರಕ್ಷಿಪುದೆನ್ನ ರಘುರಾಮ ||

ಬ್ರಹ್ಮನಾಗಿಯೆ ಸಕಲಲೋಕವ
ನಿರ್ಮಿಸುವ ಹರಿಯಾಗಿ ರಕ್ಷಾ
ಕರ್ಮದಿಂ ಪಾಲಿಸುವ ಸಂಹರಿಸುವನು ಹರನಾಗಿ |
ಕರ್ಮಸಾಕ್ಷಿ ಗುಣತ್ರಯಂಗಳ
ನೆಮ್ಮದೆಲ್ಲವ ಮೀರಿತೋರುವ
ನಮ್ಮಪಾಂಡವವರದ ವಿಟ್ಠಲರಾಯ ರಕ್ಷಿಪುದು ||

ಪ್ರಾಸುಕೂಡಲಿ ಕೂಡದಿರಲಾ
ದೋಷವೆಲ್ಲವ ತಿದ್ದುವುದು ಸಂ
ತೋಷದಿಂ ಕರ್ಣಾಟಕವಿಗಳು ಶಾಸ್ತ್ರಕೋವಿದರು |
ವಾಸುದೇವ ಕಥಾಮೃತವ ವಿ
ಶ್ವಾಸದಿಂ ನೆರೆತಿಳಿದು ಸುಖಿಸುವು
ದಾಸೆಯೆಲ್ಲವ ಬಿಟ್ಟು ಮುನಿಗಳು ಹರಿಪರಾಯಣರು ||

ಯೋಗಿಕಾಶ್ಯಪಗೋತ್ರ ಸಂಭವ
ನಾಗರುವವಿಶ್ವೇಶ್ವರನ ಸುತ ನಾ
ಗರಸ ನಾಸೊಮ್ಮೆ ಸದ್ಗುರುವಿಂಗೆ ವಂದಿಸಲು |
ಆಗ ಶಂಕರಗುರು ನಿರೀಕ್ಷಿಸ
ಲಾಗಿ ಯಾನಂದಾತ್ಮಪದದಿಂ
ಬೇಗದಿಂ ನಡಸಿದೆನು ಗೀತಾರ್ಥವನು ಬುಧರ್ಕ್ಕೊಲಿಯೆ |

ಪಾದದೊಳು ಹದಿನಾಲ್ಕು ಮಾತ್ರೆಯೊ
ಳಾದುದೀ ಭಾಮಿನಿಯ ಷಟ್ಪದಿ
ಪಾದದೆರಡನೆಯಕ್ಕರವೆ ತಾಂ ಪ್ರಾಸವೆನಿಸುವುದು |
ಈಧರೆಯೊಳೀ ಗೀತೆಯರ್ಥವ
ನ್ನೈದೆ ಪದಕೊಂದೊಂದು ಗ್ರಂಥವ
ಸಾಧಕರು ತಿಳಿವಂತೆ ಕನ್ನಡದಿಂದ ರಚಿಸಿದೆನು ||

ಇಂತು ಪೀಠಿಕಾ ಸಂಧಿ



# ಪ್ರಥಮಾಧ್ಯಾಯಂ.

**ಸೂಚನೆ:—**

ಉಭಯ ಬಲಮಧ್ಯದಲಿ ವಿಶ್ವ
ಪ್ರಭು ನಿರೀಕ್ಷಿಸೆ ಪಾರ್ಥ ತಾನತಿ
ರಭಸದಲಿ ಶೋಕಿಸುತ ರಥದೊಳು ಬಿಲ್ಲನಿಳುಹಿದನು ||

ಪರಮಬ್ರಹ್ಮವೆ ತಾನೆ ಮೊದಲೀ
ಶ್ವರನೆನಿಸಿ ನಿಜಮಾಯೆಯೊಳು ಗೋ
ಚರಿಸಿ ಸಕಲ ಚರಾಚರಂಗಳ ನೊಲಿದು ವಿಸ್ತರಿಸಿ |
ಪರಿಪರಿಯ ಗುಣಮೂರ್ತಿಗಳಲವ
ತರಿಸಿ ಭಕ್ತರಕಾವ ಭರದಿಂ
ನರನ ಸಾರಥಿಯಾದ ಕೃಷ್ಣನೆ ಸಲಹು ಮೂಜಗವ ||

ಪರಮಧರ್ಮಕ್ಷೇತ್ರವೆನಿಸುವ
ವರಕುರುಕ್ಷೇತ್ರದಲಿ ಘನಸಂ
ಗರವ ಬಯಸುವ ನಮ್ಮವರು ಪಾಂಡವರು ಮೋಹರಿಸಿ |
ಇರದೆ ಬಳಿಕವರೇನಮಾಡಿದ
ರರಿಯಲೆಲ್ಲವ ಹೇಳುಸಂಜಯ
ನಿರುತದಿಂ ದೆನಗೆಂದನಾಧೃತರಾಷ್ಟ್ರ ಭೂಪಾಲ ||

(ಸಂಜಯಂ ಪೇಳನೆಂತೆಂದೊಡೆ)

ಕೇಳುಧೃತರಾಷ್ಟ್ರವನಿಪ ಕ
ಟ್ಟಾಳು ದುರ್ಯೋಧನನು ಪಾಂಡವ
ರೇಳಿಗೆಯ ಚತುರಂಗಬಲವನು ನೋಡಿದಾಕ್ಷಣದಿ |
ಕಾಳಗದ ಮುಖದಲ್ಲಿ ಕುರುಕುಲ
ಮೌಳಿ ದ್ರೋಣನ ಪೊರೆಗೆ ಬಂದು ನೃ
ಪಾಲವಂದಿಸಿ ನುಡಿದನೀವಾಕ್ಯವನು ವಿನಯದಲಿ ||

ಗುರುವೆ ನಿಮ್ಮಯ ಶಿಷ್ಯನಾಗಿಹ
ಗುರುವ ಬುದ್ಧಿಯನುಳ್ಳ ದ್ರುಪದನ
ವರಕುಮಾರಕನಿಂದ ಮೋಹರಿಸಿಪ್ಪ ಪಾಂಡವರಾ |
ನೆರೆದ ಸೇನೆಯ ನೋಡಿದಿರೆ ರಿಪುಮೋ
ಹರದೊಳಗೆ ಬಲುಗಯ್ಯಳೆನಿಸುವ
ವರಮಹಾರಥರುಗಳ ತೋರುವೆನೆಂದ ನವನೀಶ ||

ಇಲ್ಲಿ ನೋಡೈ ಶೂರರನಿಬರು
ಬಿಲ್ಲಧರಿಸಿ ರಣಾಂಗಣದಿ ರಿಪು
ದಲ್ಲಣರ ಭೀಮಾರ್ಜುನರ ಸಾಹಸಕೆ ಸರಿಯೆನಿಪ |
ಬಲ್ಲಯುಯುಧಾನನು ವಿರಾಟನು
ಸಲ್ಲಲಿತಸುಮಹಾರಥನು ನಿ
ಮ್ಮಲ್ಲಿ ಗರ್ವಿಸದಾತನೀ ದ್ರುಪದಾಂಕನೋಡೆಂದ ||

ಚೇಕಿತಾನನು ಧೃಷ್ಟಕೇತುಗ
ಳಾಕಡೆಯ ಕಾಶೀನೃಪಾಲಕ
ನಾಕೆವಾಳನು ವೀರ ಕುಂತೀಭೋಜ ನುತ್ತಮನು |
ಬೇಕನಿಪ ಪುರುಜಿತುವು ಶೈಬ್ಯನು
ಲೋಕವಿಖ್ಯಾತರುಗಳಿವರೇ
ಕೈಕವೀರರು ಪಾಂಡುಪುತ್ರರ ಬಲದ ನಾಯಕರು ||

ಇವಯುಧಾಮನ್ಯುತ್ತಮೌಜಸೆ
ನಿವಕಣಾ ಸುಕುಮಾರ ವರ್ಗದೊ
ಳಿವನ ಮಾರಿವರಿಲ್ಲ ಕದನಕೆ ಕಾಲಭೈರವನು |
ಅವಗೆಡೆಯ ನಭಿಮನ್ಯುವಿವ ಪಾಂ
ಡವಕುಮಾರರು ದ್ರೌಪದೇಯರು
ಭುವನದೊಳಗಿವರೆಲ್ಲ ಸುಮಹಾರಥರು ಕೇಳೆಂದ ||

## ಪ್ರಥಮಾಧ್ಯಾಯ.

ವೀರನಾಪ್ರತಿವಿಂಧ್ಯ ಭೀಮಕು
ಮಾರನಾಶ್ರುತಸೋಮ ನರರೊಳು
ದಾರನಾಶ್ರುತವರ್ಮನ ಕುಲಂಗಾಶತಾಯು ಕಣಾ |
ಚಾರುಸಹದೇವಂಗೆ ಜನಿಸಿದ
ಧೀರಶ್ರುತಸಾಗರನು ಮಿಗೆಖತಿ
ಯೇರಿ ರಣಕನುವಾದ ರಮಳದ್ರೌಪದೀಸುತರು ||

ನಮ್ಮ ಸೇನೆಯೊಳಾರು ಕೆಲಬರು
ಮುಮ್ಮೊನೆಯ ನ್ನಾಯಕರವರನೆರೆ
ನಿಮ್ಮ ಚಿತ್ತದೊಳರಿಯಲೋಸುಗ ಸಕಲವೇದದಲಿ |
ಧರ್ಮಶಾಸ್ತ್ರಂಗಳಲಿ ಮುನಿಗಳ
ಸಮ್ಮತದ ವಿಪ್ರೋತ್ತಮನೆನಾ
ನೊಮ್ಮೆ ಬಿನ್ನಹಮಾಡಿ ತೋರುವೆ ನೆಂದನವನೀಶ ||

ಗರುಡಿಯಾಚಾರಿಯು ನೀನೀ
ವರಪಿತಾಮಹ ಭೀಷ್ಮಕಾಳೆಗ
ಕುರವಣಿಪಕಲಿಕರ್ಣ ಕೃಪ ರಿಪುಬಲಭಯಂಕರರು |
ಗದುವನಶ್ವತ್ಥಾಮನಾತನ
ಹೊರೆಯಲಿರುವ ವಿಕರ್ಣ ಕದನಕೆ
ಕರೆವ ಭೂರಿಶ್ರವನು ಮೊದಲಾದ ವರನೋಡೆಂದ ||

ಮತ್ತೆಹಲಬರು ವೀರರುಗಳ
ತ್ಯತ್ತಮರು ತನಗೋಸುಗರ ನೆರೆ
ತೆತ್ತಜೀವವನುಳ್ಳವರು ಶಸ್ತ್ರಾಸ್ತ್ರವನು ಪಿಡಿದು |
ಇತ್ತಲೀಸಮರದಲಿ ರಿಪುಗಳ
ನೆತ್ತಿಹಾಯ್ಕುವ ವೀರಸುಭಟರ
ಮೊತ್ತವಿದೆ ಹೇರಾಳಯುದ್ಧದ ಮಲ್ಲರಿವರುಗಳು ||

ಎಮ್ಮ ಬಲವೀ ಭೀಷ್ಮ ನಿಂದವೆ
ನೆಮ್ಮ ನಿಸಿಕೊಂಡಿಹುದು ಕೇಳೈ
ಧರ್ಮ ಪುತ್ರನ ಬಲದೊಡನೆ ಸತ್ವದಲಿ ಕಿರಿದಹುದು |
ಹಮ್ಮಿ ದಾಬಲ ಭೀಮಸೇನನ
ನೆಮ್ಮುಗೆಯಲಿರುತಿಹುದು ಧುರದಲಿ
ನಮ್ಮ ಬಲದಿಂದಧಿಕವೆಂದನು ಕೌರವರರಾಯ ||

ನಮ್ಮ ಬಲ ರಿಪುಬಲದ ಮಧ್ಯದ
ನೆಮ್ಮು ಖದ ಕೆಲಬಲವ ಖಂಡಿಸಿ
ನಿಮ್ಮ ಮಾರ್ಗಂಗಳಲಿ ರಿಪುಗಳ ಸೇನೆ ಹೊಗದಂತೆ |
ನಿಮ್ಮ ನಿಮ್ಮೈ ಸರಲಿ ಬಲಿದ
ದ್ದೆಮ್ಮ ಭೀಷ್ಮನ ಕಾದು ಕೊಳುವುದು
ನಿಮ್ಮ ನಾನುರೆ ಬೇಡಿಕೊಂಡವ ನೆಂದನವನೀಶ ||

ಧುರವಿಜಯವಿಖ್ಯಾತನೆನಿಸುವ
ಕುರುಪಿತಾಮಹ ಭೀಷ್ಮ ತಾನತಿ
ಹರುಷದಿಂ ಕುರುಪತಿಗೆ ಸಂತೋಷವನು ಜನಿಯಿಸುತ |
ಭರದಿ ಸಿಂಹನಿನಾದದಿಂದ
ಬ್ಬರಿಸಿ ಶಂಖಧ್ವಾನವನು ವಿ
ಸ್ತರಿಸಿದನು ರಿಪುಬಲ ಬೆದರಲೇನೆಂಬೆನದ್ಭುತವ ||

ಬಿಡದನಂತರದಲ್ಲಿ ಶಂಖವು
ಜಡಿವ ಭೇರಿ ಮೃದಂಗ ತಮ್ಮಟ
ಗಿಡಿಬಿಡಿಗಳಬ್ಬರದ ಹಬ್ಬರಿ ಕಹಳನಿಸ್ಸಾಳ |
ಹೊಡೆಯಲೊಂದೇಬಾರಿ ಬಲದಲಿ
ಸಿಡಿಲವೋಲ್ತ್ತದ್ಧ್ವಾನ ಗಗನದೊ
ಳಡರಿತೇನೆಂಬೆನು ಮಹಾದ್ಭುತವಾಯ್ತು ಕೇಳೆಂದ ||

ಬಳಿಕ ನೋಡಲು ಬಿಳಿಯತೇಜಿಯು
ಹೊಳಹುಮಿಗೆ ರಥದಲ್ಲಿ ಮೆರೆದಿಹ
ಲಲಿತ ದಿವ್ಯಾಂಬರದ ಚೆಲುವಿನ ಮಾಧವಾರ್ಜುನರು |
ಥಳಥಳಿಸುತಿಹದಿವ್ಯಶಂಖಂ
ಗಳನು ಪೂರೈಸಿದರು ಲಕ್ಷ್ಮೀ
ನಿಳಯನೆಸೆದನು ಗರ್ಜಿಸುವ ನವಮೇಘದಂದದಲಿ ||

ಮೊಳಗಿದನು ಹರಿ ಪಾಂಚಜನ್ಯವ
ಬಳಿಯುಮಾಕ್ಷಣ ದೇವದತ್ತವ
ಸೆಳೆದು ಪೂರೈಸಿದನು ಫಲುಗುಣನತಿಭಯಂಕರವ |
ಬಲುಪರಾಕ್ರಮಿ ಭೀಮನಾ ವೆ
ಗ್ಗಳದ ಪೌಂಡ್ರವನೂದಲಾ ದನಿ
ಕಳನ ತುಂಬಿತು ಕಳವಳಿಸಿತರಿಸೇನೆ ಭೀತಿಯಲಿ ||

ಅರಸಕುಂತೀದೇವಿಯಾತ್ಮಜ
ಹರುಷ ಮಿಗಲು ಯುಧಿಷ್ಠಿರನು ತಾ
ಭರದಿಭಾರಿಯನಂತ ವಿಜಯವನೂದಲಾಕ್ಷಣದಿ |
ವರನಕುಲಸಹದೇವರುಗಳು
ಬ್ಬರಿಸಿ ಮಣಿಪುಷ್ಪಕಸುಘೋಷವ
ಪರಿವಿಡಿಯಲೂದಿದರು ಸಮರೋದ್ಯೋಗಪರರಾಗಿ ||

ಅತಿಬಲನು ಬಲು ಬಿಲ್ಲಹಿಡಿದು
ನ್ನತನು ಕಾಶ್ಯನು ವೀರಭೀಷ್ಮನ
ಹತಿಗೆ ಕಾರಣನಹ ಶಿಖಂಡಿ ಯುಧಿಷ್ಠಿರನ ದಳಕೆ |
ಪತಿಯೆನಿಪ ದ್ರುಪದಾತ್ಮಜನುಭೂ
ಪತಿ ವಿರಾಟನು ವೀರಸಾತ್ಯಕಿ
ಧೃತಿಮಿಗಲು ಶಂಖಗಳ ಪೂರೈಸಿದರು ಸಮರದಲಿ ||

## ಪ್ರಥಮಾಧ್ಯಾಯ.

ಆರು ಕೆಲರೆನ್ನಿಂದ ಕದನವ
ಹಾರಿಬಂದವರೊಡನೆ ನಾನೀ
ಸಾರತರವಹ ಸಮರದುದ್ಯೋಗದಲಿ ಮುದದಿಂದ |
ಆರೊಡನೆಕಾದುವೆನು ಎಂಬೀ
ಕಾರಿಯವ ನಿಶ್ಚಯಿಸುವನಕಂ
ಶೌರಿತನ್ನಯ ವರರಥವ ನಿಲಿಸೆಂದನಾ ಪಾರ್ಥ ||

ಇಲ್ಲಿ ಕದನಕ್ಕೋಸುಗರತಾ
ನಿಲ್ಲದೊದಗಿಹರಾರು ಕೆಲಬರು
ಖುಲ್ಲ ಧೃತರಾಷ್ಟ್ರನ ಕುಮಾರನ ಮನಕತಿಪ್ರಿಯುವ |
ನಿಲ್ಲದೆಲ್ಲವ ಮಾಡಿತೋರಲು
ಬಲ್ಲೆನೆಂಬೀ ವೈರಿನೃಪರುಗ
ಳೆಲ್ಲರನು ತಾ ನೋಡುವನಕೀರಥವನಿಲಿಸೆಂದ ||

ಈ ಪರಿಯಲಿ ಸುಷುಪ್ತಿಯನು ಗೆಲಿ
ದಾಪರಂತಪ ಪಾರ್ಥನಿಂ ನಿಜ
ರೂಪನಹ ಸಕಲೇಂದ್ರಿಯಾಧಿಪ ಕೃಷ್ಣನೆರೆಕೇಳ್ದು |
ಆಪರಿಯಲುತ್ತಮ ರಥವನೆಲೆ
ಭೂಪ ಕೇಳೈ ಉಭಯಬಲ ವಿಗೆ
ತಾಪಿಸಲು ಮಧ್ಯದಲಿ ನಿಲಿಸಿದಸಮರರಾಯೆನಲು ||

ಧುರಕೆ ಬಂದಿಹ ಕುರುಕುಲಾನ್ವಯು
ಗುರುಪಿತಾಮಹ ಕೃಪನು ಮೊದಲಾ
ದರಸುಗಳ ಮಧ್ಯದಲಿ ಸಮರೋದ್ಯೋಗಪರರಾಗಿ |
ದುರುಳರಹ ಕೌರವರನೀಕ್ಷಿಸು
ನರನೆ ಚಾತುರ್ಬಲ ಸಮುದ್ರದ
ತೆರಳಿಕೆಗೆ ಬಡಬಾನಲನು ನೀನೆಂದನಸುರಾರಿ ||

## ಪ್ರಥಮಾಧ್ಯಾಯ.

ಆರು ಕೆಲರೆನ್ನಿಂದ ಕದನವ
ಹಾರಿಬಂದವರೊಡನೆ ನಾನೀ
ಸಾರತರವಹ ಸಮರದುದ್ಯೋಗದಲಿ ಮುದದಿಂದ |
ಆರೊಡನೆಕಾದುವೆನು ಎಂಬೀ
ಕಾರಿಯವ ನಿಶ್ಚಯಿಸುವನಕಂ
ಶೌರಿತನ್ನಯ ವರರಥವ ನಿಲಿಸೆಂದನಾ ಪಾರ್ಥ ||

ಇಲ್ಲಿ ಕದನಕ್ಕೋಸುಗರತಾ
ನಿಲ್ಲದೊದಗಿಹರಾರು ಕೆಲಬರು
ಖುಲ್ಲ ಧೃತರಾಷ್ಟ್ರನ ಕುಮಾರನ ಮನಕತಿಪ್ರಿಯವ |
ನಿಲ್ಲದೆಲ್ಲವ ಮಾಡಿತೋರಲು
ಬಲ್ಲೆವೆಂಬೀ ವೈರಿನೃಪರುಗ
ಳೆಲ್ಲರನು ತಾ ನೋಡುವನಕೀರಥವನಿಲಿಸೆಂದ ||

ಈ ಪರಿಯಲಿ ಸುಷುಪ್ತಿಯನು ಗೆಲಿ
ದಾಪರಂತಪ ಪಾರ್ಥನಿಂ ನಿಜ
ರೂಪನಹ ಸಕಲೇಂದ್ರಿಯಾಧಿಪ ಕೃಷ್ಣನೆರೆಕೇಳ್ದು |
ಆಪರಿಯಲುತ್ತಮ ರಥವನೆಲೆ
ಭೂಪ ಕೇಳ್ಕೈ ಉಭಯಬಲ ವಿಗೆ
ತಾಪಿಸಲು ಮಧ್ಯದಲಿ ನಿಲಿಸಿದಸಮರರಾಯೆನಲು ||

ಧುರಕೆ ಬಂದಿಹ ಕುರುಕುಲಾನ್ವಯ
ಗುರುಪಿತಾಮಹ ಕೃಪನು ಮೊದಲಾ
ದರಸುಗಳ ಮಧ್ಯದಲಿ ಸಮರೋದ್ಯೋಗಪರರಾಗಿ |
ದುರುಳರಹ ಕೌರವರನೀಕ್ಷಿಸು
ನರನೆ ಚಾತುರ್ಬಲ ಸಮುದ್ರದ
ತೆರಳಿಕೆಗೆ ಬಡಬಾನಲನು ನೀನೆಂದನಸುರಾರಿ ||

ಅಲ್ಲಿ ನೋಡಿದ ನಿಂದು ಚೌಪಟ
ಮಲ್ಲಪಾರ್ಥನು ಪಿತೃಪಿತಾಮಹ
ರೆಲ್ಲರನು ಆಚಾರ್ಯ ಸೋದರ ಮಾವ ಮೈದುನರ |
ಬಲ್ಲಿ ದೊಡಹುಟ್ಟಿದರ ಪುತ್ರರ
ಸಲ್ಲಲಿತರಾಗಿರುವ ಪೌತ್ರರ
ಕೊಲ್ಲಲೆನಗುಚಿತವೆ ಮಹಾದೇವೆಂದ ನಾಪಾರ್ಥ ||

ಮತ್ತೆ ಮಾವಂದಿರನು ಸುಜನಸು
ಹೃತ್ತುಗಳನೀ ಉಭಯ ಸೇನೆಯೊ
ಳುತ್ತಮರ ನೆರೆಕೊಂದು ಮಾಡುವುದೇನು ನಮಗೀಗ |
ಇತ್ತಲೀ ಬಲದೊಳಗೆ ಬಂದುರೆ
ವೊತ್ತವಾಗಿಹ ಬಂಧುಗಳಕಾ
ಣುತ್ತ ಹೇಸದೆ ಕೊಲುವ ನಾನಲ್ಲೆಂದನಾಪಾರ್ಥ ||

ಮರಕೃಪಾಕರನಾಗಿ ಪಾರ್ಥನು
ಹಿರಿದು ಶೋಕವ ತಾಳುತಾಕ್ಷಣ
ಹರಿಯು ಕೂಡೀಮಾತ ಬಿನ್ನವಿಸಿದನು ಕೈಮುಗಿದು |
ಮುರಹರನೆ ಚಿತ್ತೈಸು ಕದನಕೆ
ಭರವಸದ ಲೈತಂದ ನೆಂಟರ
ನೆಱಿಯನು ಕಯ್ಯಾರೆ ಕೊಲುವವನಲ್ಲನಾನೆಂದ ||

ಬಳಲುತಿವೆ ಯೆನ್ನವಯುವಂಗಳು
ಕಳವಳದಿ ಬಾಯೊಣಗುತಿದೆ ಮುಖ
ಬಳಲುತಿದೆ ನಡನಡುಗುತಿದೆ ಮನ್ಮನ ವಿಕಾರದಲಿ |
ತಿಳಿಯೆ ತನುರೋಮಾಂಚದಲಿ ನೆರೆ
ಮುಳುಗುತಿದೆ ಶಿವಶಿವ ಮಹಾದೇ
ವೆಲೆ ಹರಿಯೆ ಕೃಪೆಮಾಡು ಕೃಪೆಮಾಡೆಂದನಾಪಾರ್ಥ ||

ಪ್ರಥಮಾಧ್ಯಾಯ.

ಕರತಲದೆ ಜಾರುತ್ತಲಿದೆ ಯಿ

ವರಮಹಾ ಗಾಂಡೀವ ಕವಚವು
ನೆರೆಯುರಿದು ಕೌರೇಳುತಿದೆ ಮನ ಮರುಗಿ ಭ್ರಮಿಸುತಿದೆ |
ತರಹರಿಸಿ ನಿಲಲಾರೆ ನೆನ್ನಯ
ಕರಣ ಪಲ್ಲಟವಾಗುತಿದೆ ಮುರ
ಹರನೆ ಕರಣಿಸು ಕರುಣಿಸೆಂದನು ಪಾರ್ಥ ಕೈಮುಗಿದು ||

ಕಂಡೆನಾ ದುಸ್ಸ್ವಪ್ನವನು ಮುಂ
ಕೊಂಡು ತೋರ್ಪವ ಶಕುನಹಲವರ
ತಂಡವನು ಬಿಡದೀಕ್ಷಿಸುತಲಿವೆ ಕಣ್ಗಳಿದಿರಿನಲಿ |
ಕಂಡು ಕಂಡೀಸಮರದೊಳಗು
ದ್ದಂಡತನದಲಿ ಬಂಧುಗಳನೆರೆ
ದಿಂಡುದರಿದಹ ಲೇಸ ಕಾಣೆನು ದೇವ ಕೇಳೆಂದ ||

ಘಾಸಿಯಾದೆನು ರಿಪುಗಳನು ಗೆಲು
ವಾಸೆ ತಾನೆನಗಿಲ್ಲ ರಾಜ್ಯವ
ನಾಸುಖಂಗಳ ಬಯಸುವವನಾನಲ್ಲಗೋವಿಂದ |
ಕ್ಲೇಶದಿಂದಪಕೀರ್ತಿಯಿಂಬಹ
ದೇಶದಿಂ ಭೋಗಂಗಳಿಂ ನಾ
ಮೇಸುದಿನ ಜೀವಿಸಲುಮಾವುದು ಫಲವು ಹೇಳೆಂದ ||

ಆರಿಗೋಸುಗ ನಾವು ರಾಜ್ಯದ
ಸಾರತರಭೋಗಂಗಳನು ವಿ
ಸ್ತಾರಚಾರುಸುಖಂಗಳನು ಬಯಸುತ್ತಲಿರುತಿಹೆವು |
ಈರಣದಲವರೆಲ್ಲ ತಮ್ಮನು
ಸೇರಿರುವ ಪ್ರಾಣಂಗಳನು ಧನ
ಭಾರವನು ಬಿಟ್ಟೈದೆ ಬಂದರು ದೇವ ನೋಡೆಂದ ||

ವರಪಿತೃಗಳು ಪಿತಾಮಹರುಗಳು
ನಿರುತ ಸೋದರಮಾವ ಮಾವಂ
ದಿರುಗಳಾಚಾರಿಯರು ಪೌತ್ರರು ಭಾವಮೈದುನರು |
ಪರಮಬಾಂಧವರುಗಳು ಕದನಕೆ
ನೆರೆದು ಬಂದಿರುತಿಹರು ಮುರಹರ
ಕರುಣಿಸೈ ಕಾರುಣ್ಯನಿಧಿ ನೀನೆಂದನಾಪಾರ್ಥ ||

ಇವರು ನೆರೆನೆರೆದೆನ್ನ ಶಸ್ತ್ರದ
ಲವಗಡಿಸಿ ಬಿಡದಿರಿದಡೆಯು ಮೇ
ಣಿವರಸಿರಿ ಮೂಲೋಕದೊಡೆತನವೆನೆಗೆ ಸಾರ್ದಡೆಯು |
ಅವಗಡೆಯತನದಿಂದ ಬಹಜಡ
ಭುವನದೊಡೆತನಕೋಸುಗರ ನಾ
ನಿವರನೆಂತೈ ಕೊಲುವೆನೆಲೆ ಮುರಮಥನ ಹೇಳೆಂದ ||

ಆವಸುಖ ಬಹುದೆಮಗೆ ಕುರುವಂ
ಶಾವಳಿಯ ಧೃತರಾಷ್ಟ್ರಪುತ್ರರ
ನಾವು ಕೊಂದುದರಿಂದ ನೆರೆ ನಮಗಾವಲೇಸಹುದು |
ಈವಿಕರ್ಮದ ದುಷ್ಟರಿವದಿರ
ಹೇವವಿಲ್ಲದೆ ಕೊಂದೆನಾದರೆ
ದೇವಕೇಳೈ ಪಾಪವೇ ಬಹುದೆಂದನಾ ಪಾರ್ಥ ||

ಬಂಧುಗಳ ನೆರೆಕೊಂದು ಮುದದಿಂ
ಸಂದಸೌಖ್ಯವನಾವ ಪರಿಯಲಿ
ಕುಂದದೈದುವ ಛಂದವಿಲ್ಲಾ ಗದುನಿಮಿತ್ತದಲಿ |
ಇಂದಖಿಳ ಬಾಂಧವರು ನೆರಸಿಹ
ತಂದೆ ಧೃತರಾಷ್ಟ್ರನ ಕುಮಾರರ
ಮಂದಮತಿಗಳ ಕೊಲೆಗೆ ಪ್ರಾಪ್ತರೆ ನಾವು ಹೇಳೆಂದ ||

## ಪ್ರಥಮಾಧ್ಯಾಯಂ.

ಎಲೆಜನಾರ್ದನ ರಾಜ್ಯಲೋಭದ
ಬಲುಹಿನಿಂ ನೆರೆಕೆಟ್ಟ ಚಿತ್ತದ
ಖಲದಲಿಹ ಧೃತರಾಷ್ಟ್ರಸುತರೀಕುಲದ ಬಾಂಧವರು |
ಹಲವು ಮಿತ್ರದ್ರೋಹದಿಂ ಬಹ
ಕೊಲೆಯ ಪಾಪವನರಿಯರಿವದಿರು
ಸಲೆ ಸಮರಕ್ಕೈತಂದರೆಯು ನಾವಂಜಬೇಕೆಂದ ||

ಕುಲದ ಕೇಡಿನ ದೋಷವನು ನಿ
ಶ್ಚಲದ ಮಿತ್ರದ್ರೋಹವನು ನಿ
ರ್ಮಲದ ಶಾಸ್ತ್ರಂಗಳನು ನಾನೀನಿಮ್ಮ ದೆಸೆಯಿಂದ |
ತಿಳಿಯೆ ಕೇಳ್ದಾ ಪಾಪದಿಂ ಮಿಗೆ
ತೊಲಗದಿಹುದೆನಗುಚಿತವೇ ಹೇ
ಳಲೆ ಜನಾರ್ದನ ಎಂದನಾಫಲುಗುಣನು ಶೋಕಿಸುತ ||

ಕುಲಕೆಡಲು ಪಾರಂಪರೆಗಳಿಂ
ಚಲಿಸದಿಹ ಕುಲಧರ್ಮ ಕೆಡುವುದು
ಕುಲದ ಪಾರಂಪರೆಯ ಧರ್ಮವು ಕೆಡಲಿಕಾಕುಲಕೆ |
ಹಲವು ಧರ್ಮಂಗಳು ನೆರೆದು ತ
ತ್ಕುಲವನೆಲ್ಲವ ಕೆಡಿಸಿ ಕಳೆವುದು
ಕುಲಕೆಡುವ ಪರಿ ಯೆಂತೆನಲು ಕೇಳೆಂದನಾ ಪಾರ್ಥ ||

ಸಲೆಯಧರ್ಮವು ಜನಿಸುವುದರಿಂ
ಲಲನೆಯರು ವ್ಯಭಿಚರಿಸುವರು ತ
ಚ್ಚಲನದಿಂದುರೆ ವರ್ಣಸಂಕರ ಜನಿಸುವುದು ಬಳಿಕ |
ಹಲವು ಮಾತೇನೈ ಜನಾರ್ದನ
ನೆಲೆಯ ನೀನೇ ಬಲ್ಲೆನಿರ್ಮಲ
ಕುಲದಕೇಡಿಹಪರಕೆ ಲೇಸೇನೆಂದನಾಪಾರ್ಥ ||

ಜಾತಿಸಂಕರ ಕುಲವ ಕೆಡಿಸಿದ
ಪಾತಕಿಗೆಯುಂ ಕುಲಕೆಯುಂ ಕಡು
ಘಾತವಾದಕ್ಷಯದ ನರಕಕೆ ಮೂಲವಾಗಿಹುದು |
ಆತಗಳ ಪಿತೃಮಾತೃಗಳು ತ
ಚ್ಛ್ರಾತ ಪಿಂಡಾಂಜಲಿಗಳಿಲ್ಲದೆ
ಭೀತಿಪಡಿಸುವ ನರಕದಲಿ ಬೀಳುವರು ಕೇಳೆಂದ ||

ಜಾತಿಧರ್ಮಗಳೆಲ್ಲ ಕೇಳು ಸ
ನಾತನದ ಲೈತಂದುವಿವು ಕುಲ
ಘಾತುಕನದೆಸೆಯಿಂದ ಜನಿಸಿದ ವರ್ಣಸಂಕರದಿ |
ತಾ ತಳುವದನವರತ ಮಾಡುವ
ಪಾತಕಂಗಳ ಹೊಯಿಲಿನಿಂ ಮಿಗೆ
ಬೀತುಹೋದುವು ಕುಲದಮಹಿಮೆಗಳೆಂದನಾಪಾರ್ಥ ||

ಎಲೆಜನಾರ್ದನ ಚಿತ್ತವಿಸು ಸ
ತ್ಕುಲದ ಪಾರಂಪರೆವಿಡಿದು ಸಂ
ಚಲಿಸದಿಹ ಧರ್ಮವನು ಮಿಗೆವರ್ಜಿಸಿದ ಮಾನವಗೆ |
ಹಲವು ನರಕಂಗಳಲಿ ತೊಳಲುವ
ಹಲವು ಕಲ್ಪಂಗಳ ನಿವಾಸದ
ನೆಲೆಯಹುದು ನಾಕೇಳಿಬಲ್ಲೆನು ಧರ್ಮಶಾಸ್ತ್ರದಲಿ ||

ಹರಹರಾ ನಾವಂಗವಿಸಿದೆವು
ಹಿರಿದು ಪಾಪವಮಾಡಲಿಕೆ ನಿ
ಷ್ಠುರರಲಾ ಮುರಹರನೆ ಕೇಳೀರಾಜ್ಯಸಂಪದವ |
ಸಿರಿಯ ಸುಖಲೋಭದಲಿ ಬಂದುರೆ
ನೆರೆದಖಿಲ ಬಾಂಧವರುಗಳ ಸಂ
ಹರದೊಳಗೆ ಮಡುಹಲ್ಕೆ ಬಿಡದುದ್ಯೋಗಿಸಿದೆವೆಂದ ||

ಪ್ರಥಮಾಧ್ಯಾಯಂ.

ಶರಧನುಗಳನು ಹಾಯ್ಕಿದೆನ್ನನು
ಕೆರಳಿದೀಧೃತರಾಷ್ಟ್ರಸೂನುಗ
ಳಿರದೆ ಶಸ್ತ್ರಾಸ್ತ್ರಂಗಳಿಂದಿರಿಯಲ್ಕೆ ನಾನದನು ।
ಪರಿಹರಿಸಿಕೊಳದಿದುವೆ ಸಖವೆಂ
ದರಿತೆನಾದರೆ ಕೇಳು ತನ್ನಿಂ
ಪಿರಿದು ಸುಕೃತಿಗಳಾರು ಧರೆಯೊಳಗೆಂದನಾಪಾರ್ಥ ॥

ಅವಧರಿಸು ಧೃತರಾಷ್ಟ್ರನರನಾ
ಹವದೊಳೀಪರಿನುಡಿದು ಶರಚಾ
ಪವನಿಳುಹಿ ಕಡುಶೋಕದಿಂ ನೆರೆ ನೊಂದು ಚಿತ್ತದಲಿ ।
ಶಿವ ಎನುತ ರಥದೊಳಗೆ ಮಂಡಿಸ
ಲವನನತಿಕೃಪೆಯಿಂದಲಾವಮಾ
ಧವ ನಿರೀಕ್ಷಿಸಿ ತಿಳುಹಬೇಕೆಂದೆನುತ ಮನದಂದ ॥

ಇಂತು ಕೃಷ್ಣಾರ್ಜುನ ಸಂವಾದದೊಳ್

ಅರ್ಜುನ ವಿಷಾದಯೋಗವೆಂಬ

ಪ್ರಥಮಾಧ್ಯಾಯಂ

ಸಂಪೂರ್ಣಂ



# ದ್ವಿತೀಯಾಧ್ಯಾಯಂ

ಸೂಚನೆ || ಧನುವ ಬಿಟ್ಟರ್ಜುನನಿರಲು ಹರಿ
ವಿನಯದಿಂ ವರ ಸಾಂಖ್ಯಯೋಗವ
ಮನವೊಲಿದು ನಿಜಯೋಗಬುದ್ಧಿಯನಂದು ಬೋಧಿಸಿದ ||

ಚಿತ್ತವಿಸು ಧೃತರಾಷ್ಟ್ರ ಮಧುರಿಪು
ಮತ್ತೆ ಕೃಪೆಯಿಂ ಕಂಬನಿಯ ತುಂ
ಬುತ್ತಲತಿನಿರ್ವಿಣ್ಣನಾಗಿಹ ನರನನೀಕ್ಷಿಸುತ |
ತತ್ವಬೋಧೆಯನರುಹಬೇಕೆಂ
ದುತ್ತಮದ ವಾಕ್ಯವನು ನುಡಿದನು
ತೆತ್ತಿಗನು ತಾನಾಗಿ ಭಕ್ತನ ಕಾವಭರದಿಂದ ||

ಎಲೆಧನಂಜಯ ಖಳರ ಸೀತಿಯ
ಬಲುಹಿಡಿದು ನೆರೆನೋಡಿ ನುಡಿವುದು
ಹಳಿವುಕೀರ್ತಿಯ ತಹುದು ಪರಲೋಕವನು ಕೆಡಿಸುವುದು |
ಬಲಿದಶೋಕದ ಮೂರ್ಛೆ ರಿಪುಗಳ
ಕಲಹದವಸರದಲ್ಲಿ ನಿನ್ನನು
ತೊಲಗದೆಲ್ಲಿಂದೈದಿತ್ತೈ ಹೇಳೆಂದನಸುರಾರಿ ||

ಅರಿಭಯಂಕರ ನೀನಪುಂಸಕ
ರಿರವನೈದಲುಬೇಡ ನಿನಗಿದು
ದೊರಕಲಾಗದು ಧೀರತನಕಿದು ಹಾನಿಕರವಹುದು |
ಮರುಳೆ ಬಡಮನದಿಂದ ಹೆದರದೆ
ಮರಳುತನವನು ಬಿಟ್ಟು ಕದನಕೆ
ಭರವಸದಲೇಳೆನಲು ಕೃಷ್ಣಗೆ ಪಾರ್ಥನಿಂತೆಂದ ||

ಚಿತ್ತವಿಸು ಮಧುವೈರಿ ನಿರ್ಮಳ
ಚಿತ್ತದಿಂ ಪೂಜಿಸಿಕೊಳಲ್ಕ
ತ್ಯುತ್ತಮರ ಕಲಿಭೀಷ್ಮದ್ರೋಣ ಕೃಪಾದಿಗುರುಗಳನು |
ಹೊತ್ತ ಕೂರಂಬುಗಳಲೆಂತೈ
ಕತ್ತರಿಸುವೆನು ನಿಮ್ಮಡಿಗೆ ನಾ
ಬಿತ್ತರಿಸಲಂಜುವೆನು ವಿಶ್ವಂಭರನೆ ಕೇಳೆಂದ ||

ಹಿರಿಯರನು ಗುರುಗಳನು ಕೊಲ್ಲದೆ
ತಿರಿದುಣುವುದೇ ಲೇಸು ಜಗದಲಿ
ಗುರುಗಳನು ನೆರೆಕೊಂದವರ ರಕ್ತಂಗಳಿಂ ನೆನೆದ |
ಪರಕೆ ಸಲದ ಅನರ್ಥ ಕಾಮದ
ಪಿರಿದು ಭೋಗಂಗಳನು ಭೋಗಿಸಿ
ನರಕದಲಿ ಬೀಳುವೆನದೆಂತೈ ದೇವ ಹೇಳೆಂದ ||

ಕದನಮುಖದೊಳಗವರು ನಮ್ಮನು
ಸದೆವರೋ ಮೇಣವರ ನಾವೇ
ಸದೆವೆವೋ ಉಭಯರೊಳು ಜಯಸಿರಿ ಯಾರ ಸೇರುವಳೋ |
ಅದರಿನಿಂನಾನಾರ ಕೆಲಬರ
ವಧಿಸಿಬದುಕನು ಬಯಸೆನವರುಗ
ಳಿದಿರಲೈದಿಹೆ ನೋಡು ಧೃತರಾಷ್ಟ್ರನ ಕುಮಾರಕರ ||

ಕಕ್ಕುಲಿತೆಯಿಂ ಕೆಟ್ಟಚಿತ್ತದಿ
ಸೊಕ್ಕಿ ಧರ್ಮದ ನೆಲೆಯ ಕಾಣದ
ಚಿಕ್ಕವನು ನಾನಿಮ್ಮ ಕೇಳುವ ಲೇಸದಾವುದನು |
ಸಿಕ್ಕರಿಯೆ ಪೇಳೆನಗೆ ನೀ ಹಿಂ
ದಿಕ್ಕಿಕೋ ಮರೆವೊಕ್ಕನೆನ್ನನು
ಮಕ್ಕಳೋಪಾದಿಯಲಿ ಶಿಕ್ಷಿಸಿಕಾಯಬೇಕೆಂದ ||

ಹಗೆಗಳಿಲ್ಲದ ಭೂತಳದ ಹೆ
ಚ್ಚುಗೆಯರಸುತನವಾದಡೆಯು ಸುರ
ನಗರಿಯೊಡೆತನವಾದಡೆಯು ಕರಣೇಂದ್ರಿಯಂಗಳನು |
ಮಿಗೆಯೊಣಗಿಸುವ ಶೋಕವುಂಟದ
ತೆಗೆವುಪಾಯವ ಕಾಣೆನೈ ವರ
ನಿಗಮತತ್ವಾರ್ಥವನು ಮುರಹರ ಕರುಣಿಸೆನಗೆಂದ ||

ಕೇಳು ಧೃತರಾಷ್ಟ್ರಾವನಿಪ ಕ
ಟ್ಟಾಳು ಫಲುಗುಣನೀಹದನ ಗೋ
ಪಾಲಕೃಷ್ಣನ ನೋಡಿ ತಾ ಕೈಮುಗಿದು ಬಿನ್ನವಿಸಿ |
ಕಾಳಗವನಾನೊಲ್ಲೆ ದೇವ ಕೃ
ಪಾಳು ನೀನೇ ಬಲ್ಲೆಯೆನುತ ಛ
ಡಾಳಿಸುವ ಶೋಕದಲಿ ಮೌನದೊಳಿರ್ದನಾಪಾರ್ಥ ||

ಅವಧರಿಸು ಧೃತರಾಷ್ಟ್ರವರಕೇ
ಶವರುಭಯಬಲಮಧ್ಯದಲಿ ಶೋ
ಕವನು ತಾಳುತ ಮುಂದುಗೆಡುತಿಹ ಪಾರ್ಥನನು ನೋಡಿ |
ಇವನು ಬೋಧಿಸಬೇಕೆನುತಲಾ
ಭುವನಪಾವನಮೂರ್ತಿಯದುಕುಲ
ಭವನು ಬಳಿಕೀ ಮಾತ ನುಡಿದನು ಪರಮತತ್ವವನು ||

ಎಲೆಧನಂಜಯ ಕೇಳು ಶೋಕಕೆ
ಕೊಲೆಗರುಹರಲ್ಲದ ನಿಜಾನ್ವಯ
ತಿಲಕ ಭೀಷ್ಮದ್ರೋಣ ಮೊದಲಾದವರ ನೀಕುರಿತು |
ಅಳಲುತಿಹೆ ಬಲ್ಲವರವೊಲು ನೀ
ಹಲವ ವಾದಿಸುತಿಹೆ ಮೃತರಿಗಂ
ತುಳಿದಿಹರಿಗಂ ತತ್ವವಿದರಳಲೆಂದನುಸುರಾರಿ ||

ಹಿಂದೆ ನಾನನವರತ ಕೇಳೈ
ಕುಂದದಿಹೆನಿಲ್ಲೆಂಬುದಿಲ್ಲೈ
ಇಂದು ನೀ ನಿಲ್ಲೆಂಬುದಿಲ್ಲೈ ಈಜನಾಧಿಪರು |
ಕುಂದದಿಹರಿಲ್ಲೆಂಬುದಿಲ್ಲಾ
ನಂದದಿಂ ನಾವೆಲ್ಲರಿಲ್ಲಿಂ
ಮುಂದಿಹೆವು ಇಲ್ಲೆಂಬ-ದಿಲ್ಲೆಲೆಪಾರ್ಥ ಕೇಳೆಂದ ||

ತನುವನಭಿಮಾನಿಸಿದವಂಗೀ
ತನುವಿನಲಿ ಕೌಮಾರ ಯೌವನ
ದಿನದನಂತರ ಜರೆಗಳೆಂಬಿವನನುಭವಿಸುವಂತೆ ||
ತನುವಿದನು ಬಿಟ್ಟನ್ಯದೇಹವ
ನನುಕರಿಸಿ ತಾನಿರ್ದಡದರಲಿ
ವಿನುತಧೀರನು ಮುಂದುಗೆಡನೆಲೆಪಾರ್ಥ ಕೇಳೆಂದ ||

ಎಲೆಧನಂಜಯ ಇಂದ್ರಿಯಂಗಳು
ಹಲವು ವಿಷಯಂಗಳನು ಸೋಂಕಲು
ಫಲವದಕೆ ಶೀತೋಷ್ಣಸುಖದುಃಖವನು ಕೊಡುತಿಹುವು |
ಚಲಿಸಿ ಹೋಗುತ ಬರುತಿಹುವು ತಾ
ವೆಲಗೆಕೆಡುವವನಿತ್ಯಗಳು ನೀ
ಸೊಲವಿನಿಂದವ ಸೈರಿಸೆಂದನು ದಾನವಧ್ವಂಸಿ ||

ಆವುದೊಂದುನಿಮಿತ್ತವೀವಿಷ
ಯಾವಳಿಗಳಿಂದ್ರಿಯದ ಸೋಂಕುಗ
ಳೀವ ಸುಖದುಃಖಗಳಲಿ ಸಮವಾದ ಪುರುಷನನು |
ನೋವನೈದಿಸದಿಪ್ಪವಾತನೆ
ಜೀವರೊಳಗುತ್ತಮನೆನಿಸುವನು
ಪಾವನದ ಮೋಕ್ಷಕ್ಕೆ ಯೋಗ್ಯನು ಪಾರ್ಥ ಕೇಳೆಂದ ||

ಆವ ಪರಿಯಿಂದಿಲ್ಲದಿಹುದಕೆ
ಭಾವವುಂಟಹುದಿಲ್ಲವುಂಟಹ
ಪಾವನಕೆ ನಿಜಭಾವವಿಲ್ಲದೆಯಿಹುದು ತಾನಿಲ್ಲ |
ಈವುಭಯವನು ಬ್ರಹ್ಮವಿದರಿಂ
ತಾವುತಿಳಿಯಲು ಬೇಕದಾದಡೆ
ನೀವಿಮಲಮತಿಯಿಂದ ತಿಳಿಯೆಲೆಪಾರ್ಥ ಕೇಳೆಂದ ||

ಈಸಮಸ್ತ ಚರಾಚರಂಗಳು
ವೋಸರಿಸವಾವುದರದೆಸೆಯಿಂ
ಲೇಸೆನಿಸಿ ನಿರ್ಮಿಸಲುಪಟ್ಟಿಹ ವಾಸ್ವರೂಪಿಂಗೆ |
ವಾಸವಾದಿ ಸಮಸ್ತಭುವನ ನಿ
ವಾಸಿಗಳು ಮೊದಲಾಗಿ ನಿತ್ಯವಿ
ನಾಶರಹಿತಾತ್ಮಂಗೆ ಕೇಡನು ಮಾಳ್ಪರಿಲ್ಲೆಂದ ||

ಕೆಡದ ಸುಸ್ಥಿರನಪ್ರಮೇಯಂ
ಗೊಡಲಹಂಕಾರದಲಿ ಜೀವದ
ಜಡರನಿಂದಲಿ ದೇಹಿಯೆನಿಸುತಲಿಹ ಚಿದಾತ್ಮಂಗೆ |
ಕೆಡುವ ದೇಹಾದಿಗಳ ಧರ್ಮದ
ಗಡಣವಾತಂಗಿಲ್ಲವೆಂದೇ
ನುಡಿವರದುಕಾರಣ ಸಮರಕನುವಾಗು ನೀನೆಂದ ||

ಆವನೊಬ್ಬನು ತನುವಿನೊಳಗಿಹ
ಜೀವವನು ಕೊಲುವಾತನೆಂಬವ
ನಾವನೊಬ್ಬನು ಕೊಲಿಸಿಕೊಂಬವ ತಾನೆಯೆಂಬವನು |
ಭಾವಿಸಲಿಕಿವರಿಬ್ಬರುಂ ದಿಟ
ತಾವರಿಯರೈ ಕೊಲಿಸಿಕೊಂಬಸ್ವ
ಭಾವದವತಾನಲ್ಲ ಕೊಲುವವನಲ್ಲ ತಾನೆಂದ ||

ನಿತ್ಯನಾತ್ಮನು ಸರ್ವಗತನ
ತ್ಯತ್ತಮನು ತಾನಚಲನದರಿಂ
ಸುಸ್ಥಿರನು ತಾನಾದಕಾರಣ ಕಡಿವೊಡಳವಲ್ಲ |
ಮತ್ತೆ ಸುಡಲಳವಲ್ಲ ನೀರಿನ
ಲೊತ್ತಿನೆನೆಯಿಸಬಾರದೊಣಗಿಸಿ
ಸತ್ವಗುಂದಿಸಬಾರದೈ ಕಲಿಪಾರ್ಥ ಕೇಳೆಂದ ||

ಈತನವ್ಯಕ್ತನುಮಚಿಂತ್ಯನು
ಮೀತ ತಾನವಿಕಾರಿ ಯೆಂದಿದ
ನಾತುಮಜ್ಞರು ಪೇಳುತಿಹರದು ಕಾರಣದಲಿನ್ನು |
ಈತೆರನ ನೀನರಿದು ಬಳಿಕೀ
ಯಾತುಮಂಗೋಸುಗರ ಮನದತಿ
ಭೀತಿಯಿಂದಲಿ ಪಾರ್ಥಶೋಕಿಸಲುಚಿತವಲ್ಲೆಂದ ||

ಮತ್ತಿದನು ಫಲುಗುಣನೆ ಕೇಳೈ
ನಿತ್ಯ ಜನ್ಮವ ಪಡೆವನಾತ್ಮನು
ನಿತ್ಯ ಸಾವುಳ್ಳವನು ತಾನಹನೆಂದು ಮತಿಗೆಟ್ಟು |
ಚಿತ್ತದಲಿ ನೀಬಗೆದೆಯಾದಡೆ
ಸತ್ತು ಹುಟ್ಟುವ ಗುಣವ ಕೊಡುವ
ಚಿತ್ತನಿಸಿದಾತ್ಮನು ಕುರಿತು ಶೋಕಿಸಲುಬೇಡೆಂದ ||

ಉದುಭವಿಸಿದಾತ್ಮಂಗೆ ಸಾವೇ
ವಿದಿತ ಸತ್ತಾತ್ಮಂಗೆ ಪುನರಪಿ
ಯುದುಭವಿಸುವುದು ನೆಲೆ ಕಣಾ ಕೇಳದುನಿಮಿತ್ತದಲಿ |
ಇದಕೆ ಪರಿಹಾರಾರ್ಥವಿಲ್ಲದ
ಹದನ ನೀನೇತಿಳಿದು ಕಡುಶೋ
ಕದಲಿ ಮರುಗುವುದುಚಿತವಲ್ಲೆಲೆಪಾರ್ಥ ಕೇಳೆಂದ ||

ನಿತ್ಯನಾತ್ಮನು ಸರ್ವಗತನ
ತ್ಯತ್ತಮನು ತಾನಚಲನದರಿಂ
ಸುಸ್ಥಿರನು ತಾನಾದಕಾರಣ ಕಡಿವೊಡಳವಲ್ಲ |
ಮತ್ತೆ ಸುಡಲಳವಲ್ಲ ನೀರಿನ
ಲೊತ್ತಿನೆನೆಯಿಸಬಾರದೊಣಗಿಸಿ
ಸತ್ವಗುಂದಿಸಬಾರದೈ ಕಲಿಪಾರ್ಥ ಕೇಳೆಂದ ||

ಈತನವ್ಯಕ್ತನುಮಚಿಂತ್ಯನು
ಮೀತ ತಾನವಿಕಾರಿ ಯೆಂದಿದ
ನಾತುಮಜ್ಞರು ಪೇಳುತಿಹರದು ಕಾರಣದಲಿನ್ನು |
ಈತೆರನ ನೀನರಿದು ಬಳಿಕೀ
ಯಾತುಮಂಗೋಸುಗರ ಮನದತಿ
ಭೀತಿಯಿಂದಲಿ ಪಾರ್ಥಶೋಕಿಸಲುಚಿತವಲ್ಲೆಂದ ||

ಮತ್ತಿದನು ಫಲುಗುಣನೆ ಕೇಳೈ
ನಿತ್ಯ ಜನ್ಮವ ಪಡೆವನಾತ್ಮನು
ನಿತ್ಯ ಸಾವುಳ್ಳವನು ತಾನಹನೆಂದು ಮತಿಗೆಟ್ಟು |
ಚಿತ್ತದಲಿ ನೀಬಗೆದೆಯಾದಡೆ
ಸತ್ತು ಹುಟ್ಟುವ ಗುಣವ ಕೊಡುವ
ಚಿತ್ತನಿಸಿದಾತ್ಮನು ಕುರಿತು ಶೋಕಿಸಲುಬೇಡೆಂದ ||

ಉದುಭವಿಸಿದಾತ್ಮಂಗೆ ಸಾವೇ
ವಿದಿತ ಸತ್ತಾತ್ಮಂಗೆ ಪುನರಪಿ
ಯುದುಭವಿಸುವುದು ನೆಲೆ ಕಣಾ ಕೇಳದುನಿಮಿತ್ತದಲಿ |
ಇದಕೆ ಪರಿಹಾರಾರ್ಥವಿಲ್ಲದ
ಹದನ ನೀನೇತಿಳಿದು ಕಡುಶೋ
ಕದಲಿ ಮರುಗುವುದುಚಿತವಲ್ಲೆಲೆಪಾರ್ಥ ಕೇಳೆಂದ ||

ಮೊದಲಲಿಲ್ಲದ ಭೂತನಿಕರವಿ
ದೊದವಿದೀಮಾಯಾಪ್ರಪಂಚದ
ಲುದಿಸಿದುವು ಮಧ್ಯದಲಿ ತಾಂ ನೆಲೆಯಾಗಿ ತೋರುವುವು |
ತುದಿಗೆ ತಾವಿವು ತೋರದಡಗುವು
ವಿದನು ನೀ ನೆರೆತಿಳಿದು ದೇಹದ
ವಧೆಗೆ ಮಾಡುವ ಶೋಕವಾವುದು ಪಾರ್ಥ ಹೇಳೆಂದ ||

ಅತಿಮಹಾಶ್ಚರ್ಯದವೊಲಾತ್ಮೋ
ನ್ನತಿಯನೊಬ್ಬನೊಳೊಬ್ಬ ಕಾಂಬನು
ಅತಿ ಮಹಾಶ್ಚರ್ಯದವೊಲಿನ್ನೊಬ್ಬನು ನುಡಿಯುತಿಹನು |
ಅತಿ ಮಹಾಶ್ಚರ್ಯದವೊಲಾತ್ಮ
ಸ್ಥಿತಿಯ ಕೇಳುವ ಕೇಳ್ದರೆಯು ನೆರೆ
ಮತಿಯೊಳಾತ್ಮನನರಿಯನೆಲೆ ಕಲಿಪಾರ್ಥ ಕೇಳೆಂದ ||

ಈತೆರದಲಿ ಚರಾಚರದ ವಿ
ಖ್ಯಾತದೇಹಂಗಳಲಿ ನೆಲಸಿ
ಪ್ಪಾತುಮನು ನಿತ್ಯನು ನಿರಾಮಯನಾಗಿ ತಾನೆಲಗೆ |
ಆತ ಕೈದುಗಳಿಂದ ನೆರೆಸಾ
ವಾತನಲ್ಲಾ ಈಚರಾಚರ
ಭೂತನಿಕರವನಿತ್ಯವಿದ ಕುರಿತಳಲಬೇಡೆಂದ ||

ನಿನ್ನ ಧರ್ಮವನಾದರೆಯು ನೀ
ಸನ್ನಿಹಿತಚಿತ್ತದಿ ನಿರೀಕ್ಷಿಪು
ದುನ್ನತದ ಸಮರದಲಿ ಹಿಮ್ಮೆಟ್ಟುವುದುಚಿತವಲ್ಲ |
ಇನ್ನದೇಕೆನೆ ಕ್ಷತ್ರಿಯಂಗೆ ನಿ
ಜಾನ್ವಯದ ಹರಿವಾದರೆಯು ಸಂ
ಪನ್ನಧರ್ಮದ ಸಮರದಿಂ ಬೇರಿಲ್ಲಲೇಸೆಂದ ||

ಕದನದಲಿ ನೀ ಮಡಿದೆಯಾದರೆ
ಮುದದಲೈದುವೆ ಸ್ವರ್ಗವನು ಮೇ
ಣಿದನು ನೀನೇ ಗೆಲಿದೆಯಾದರೆ ಭೂತಳದ ಸಿರಿಯ |
ಹದುಳಸುಖದಲಿ ಭೋಗಿಸುವೆ ಕೇ
ಳದುನಿಮಿತ್ತದಲೇಳು ಫಲುಗುಣ
ಕದನಕತಿಮುದದಿಂದಲುದ್ಯೋಗವನು ಮಾಡೆಂದ ||

ಕಾದುವೊಡೆ ಸುಖದುಃಖವನು ನಿನ
ಗಾದ ಲಾಭಾಲಾಭವನು ನೆರೆ
ಕಾದಿದಲ್ಲಿಯ ಜಯಪರಾಜಯವಿನಿತನೆಲ್ಲವನು |
ಭೇದಿಸದೆ ಸರಿಮಾಡಿ ಬಳಿಕಲಿ
ಕಾದು ಈಪರಿ ಕಾದಿದುದರಿಂ
ದೈದದಿಹೆ ದುಷ್ಕೃತವನೀನೆಲೆಪಾರ್ಥ ಕೇಳೆಂದ ||

ಎಲೆಧನಂಜಯ ಸಾಂಖ್ಯದಲ್ಲಿಯ
ಲಲಿತವಹ ಬುದ್ಧಿಯನು ಹೇಳಿದೆ
ನೊಲವಿನಿಂ ಕೇಳಿದರೆ ಪೇಳ್ವೆನು ಯೋಗಬುದ್ಧಿಯನು |
ನೆಲೆಗೆ ನೀನಾಯೋಗಬುದ್ಧಿಯ
ಚಲಿಸದದ ಕೈಕೊಂಡೆಯಾದರೆ
ಹಲವುಕರ್ಮದ ಕಟ್ಟುಗಳ ನೆರೆಹರಿವೆ ಕೇಳೆಂದ ||

ಪಿರಿದೆನಿಸುವೀಯೋಗದಲ್ಲಿಯೆ
ಚರಿಸುತಿರಲಂತರಿತವಾದರೆ
ನಿರುತದಿಂ ಕೇಡಿಲ್ಲ ಬಟ್ಟರೆ ಪಾಪ ತಾನಿಲ್ಲ |
ದೊರಕಿದನಿತೇ ಧರ್ಮಲೇಶವು
ಪಿರಿದೆನಿಪ ಸಂಸಾರದುಃಖದ
ಶರಧಿಯನು ದಾಂಟಿಸುವುದೆಲೆ ಕಲಿಪಾರ್ಥ ಕೇಳೆಂದ ||

ಕದನದಲಿ ನೀ ಮಡಿದೆಯಾದರೆ
ಮುದದಲೈದುವೆ ಸ್ವರ್ಗವನು ಮೇ
ಣಿದನು ನೀನೇ ಗೆಲಿದೆಯಾದರೆ ಭೂತಳದ ಸಿರಿಯ |
ಹದುಳಸುಖದಲಿ ಭೋಗಿಸುವೆ ಕೇ
ಳದುನಿಮಿತ್ತದಲೇಳು ಫಲುಗುಣ
ಕದನಕತಿಮುದದಿಂದಲುದ್ಯೋಗವನು ಮಾಡೆಂದ ||

ಕಾದುವೊಡೆ ಸುಖದುಃಖವನು ಸಿನ
ಗಾದ ಲಾಭಾಲಾಭವನು ನೆರೆ
ಕಾದಿದಲ್ಲಿಯ ಜಯಪರಾಜಯವಿನಿತನೆಲ್ಲವನು |
ಭೇದಿಸದೆ ಸರಿಮಾಡಿ ಬಳಿಕಲಿ
ಕಾದು ಈಪರಿ ಕಾದಿದುದರಿಂ
ದೈದದಿಹೆ ದುಷ್ಕೃತವನೀನೆಲೆಪಾರ್ಥ ಕೇಳೆಂದ ||

ಎಲೆಧನಂಜಯ ಸಾಂಖ್ಯದಲ್ಲಿಯ
ಲಲಿತವಹ ಬುದ್ಧಿಯನು ಹೇಳಿದೆ
ನೊಲವಿನಿಂ ಕೇಳಿದರೆ ಪೇಳ್ವೆನು ಯೋಗಬುದ್ಧಿಯನು |
ನೆಲೆಗೆ ನೀನಾಯೋಗಬುದ್ಧಿಯ
ಚಲಿಸದದ ಕೈಕೊಂಡೆಯಾದರೆ
ಹಲವುಕರ್ಮದ ಕಟ್ಟುಗಳ ನೆರೆಹರಿವೆ ಕೇಳೆಂದ ||

ಪಿರಿದೆನಿಸುವೀಯೋಗದಲ್ಲಿಯೆ
ಚರಿಸುತಿರಲಂತರಿತವಾದರೆ
ನಿರುತದಿಂ ಕೇಡಿಲ್ಲ ಬಟ್ಟರೆ ಪಾಪ ತಾನಿಲ್ಲ |
ದೊರಕಿದನಿತೇ ಧರ್ಮಲೇಶವು
ಪಿರಿದೆನಿಪ ಸಂಸಾರದುಃಖದ
ಶರಧಿಯನು ದಾಂಟಿಸುವುದೆಲೆ ಕಲಿಪಾರ್ಥ ಕೇಳೆಂದ ||

ಕುರುಕುಮಾರಕ ಮೋಕ್ಷಮಾರ್ಗಕೆ
ಪರಮಸಾಂಖ್ಯದ ಬುದ್ಧಿಯೊಂದೇ
ನಿರುತದಿಂ ಸಾಧನವಹುದು ವೈರಾಗ್ಯಯುಕ್ತರಿಗೆ |
ಇರದೆ ವಿಷಯಾಸಕ್ತರೆನಿಸುವ
ಪರಿಯನರಿಯದ ಕರ್ಮಿಗಳ ದು
ಸ್ತರದ ಬುದ್ಧಿಯನಂತಬಹುಶಾಖೆಗಳನೈದಿಹುದು ||

ಕರ್ಮಪರವಹ ವೇದವನು ನೆರೆ
ನೆಮ್ಮಿ ಭೋಗಾಸಕ್ತರಾಗಿಹ
ಕರ್ಮಿಗಳು ಪರಮೋಕ್ಷತತ್ವಜ್ಞಾನವೆಂದೆನಿಪ |
ಧರ್ಮವೇ ತಾನಿಲ್ಲೆನುತ ಬಹು
ಕರ್ಮವೆನಿಸುವ ಬಂಜೆಹೂವಿನ
ಧರ್ಮವಿಡಿದೀಮಾತ ನುಡಿವರು ಪಾರ್ಥ ಕೇಳೆಂದ ||

ವಿಷಯದಾಸಕ್ತರುಗಳೇ ಬಹು
ವಿಷಯದೊದವಿನ ಸ್ವರ್ಗವನು ತ
ದ್ವಿಷಯಭೋಗೈಶ್ವರ್ಯಲಾಭಂಗಳನು ನೆರೆ ಬಯಸಿ |
ವಿಷಯಜನ್ಮಂಗಳನು ಕೊಡುವಾ
ಯಸದ ಕರ್ಮಂಗಳನು ಮಾಡುತ
ಹೊಸಪರಿಯ ದುಃಖಂಗಳಲಿ ತೊಳಲುವರು ಕೇಳೆಂದ ||

ಭೋಗಲಂಪಟರಾಗಿ ಫಲದನು
ರಾಗವನು ಹುಟ್ಟಿಸುವ ಶ್ರುತಿಗಳ
ಭಾಗದಿಂ ಮೋಹಿಸುವ ಚಿತ್ತವನುಳ್ಳ ಮನುಜರಿಗೆ |
ಯೋಗಸಾಂಖ್ಯಸಮಾಧಿಯುತರಹ
ಯೋಗಿಗಳ ಮತ ಗೋಚರಿಸದು
ದ್ಯೋಗದಿಂ ಕರ್ಮಂಗಳಿಗೆ ತಿರುಗುವರು ಕೇಳೆಂದ ||

ವೇದವೀತ್ರೈಗುಣ್ಯವಿಷಯದ
ಹಾದಿಯಲಿ ನಡೆಯಿಸಲು ಸತ್ವಗು
ಣೋದಯದಿ ಬಂದುದನು ರಕ್ಷಿಸಿ ಬಾರದಿದ್ದುದನು |
ಆದರಿಸಿ ಬಯಸದಖಿಲದ್ವಂ
ದ್ವಾದಿಗಳ ನೆರೆ ಬಿಟ್ಟು ನಿನ್ನನು
ಭೇದವಿಲ್ಲದೆ ತಿಳಿದು ತ್ರಿಗುಣಾತೀತನಾಗೆಂದ ||

ಹಳ್ಳ ನದಿ ಕೆರೆ ಭಾವಿಗಳ ಜಲ
ದಲ್ಲಿ ತನಗೆನಿತುದಕ ಬೇಕದ
ನೆಲ್ಲವನುಪಾರ್ಜಿಸಲುದಧಿಯೊಳು ಗಣಿಸುವಂದಲಿ |
ಬಲ್ಲವಿಪ್ರಂಗಖಿಳಶ್ರುತಿಮುಖ
ದಲ್ಲಿ ದೊರಕೊಂಬನಿತದೆಲ್ಲವು
ನಿಲ್ಲದಾತ್ಮಜ್ಞಾನದಿಂದಹುದೆಂದನಸುರಾರಿ ||

ಕರ್ಮದಲ್ಲಧಿಕಾರಿ ನೀ ಸ
ತ್ಕರ್ಮವನು ಮಾಡುವುದು ಬಳಿಕಾ
ಕರ್ಮನಿರ್ಮಿತದಿಂದ ಹೆಚ್ಚುತಲಿಹ ಫಲಂಗಳನು |
ನೆಮ್ಮದಿರು ಜನ್ಮವನು ಕೊಡುವವಿ
ಕರ್ಮಕಾರಣನಾಗದಿರು ಸ
ತ್ಕರ್ಮದಲಿ ಸನ್ಯಾಸವನು ಮಾಡದಿರು ನೀನೆಂದ ||

ಎಲೆಧನಂಜಯ ಯೋಗದಲಿ ನೀ
ನೆಲಸಿ ಫಲವನು ಬಿಟ್ಟು ಕರ್ಮವ
ನೊಲಿದು ಮಾಡೈ ಹಾನಿವೃದ್ಧಿಗಳಲ್ಲಿ ಸಮನಾಗಿ |
ನೆಲೆಗೊಳಲು ಕೇಳಾಸುಕರ್ಮದ
ಫಲವ ಬಿಟ್ಟುಸಮತ್ವವನು ನಿ
ರ್ಮಲದ ಯೋಗವೆನುತ್ತಿಹರು ತಿಳಿಯೆಂದನಸುರಾರಿ ||

ಎಲೆಧನಂಜಯ ಮೋಕ್ಷವನು ತಾ
ನೊಲಿದು ಕೊಡುತಿಹ ಬುದ್ಧಿಯೋಗವು
ಸುಲಭ ಕೇಳದರಿಂದ ಸಂಸಾರವನು ನೆರೆ ಕೊಡುವ |
ಫಲದಕರ್ಮದಿ ಹೀನನಾಗಿಯೆ
ಒಲಿದು ಮರೆಯೊಗು ಬುದ್ಧಿಯೋಗವ
ಫಲವ ಬಯಸುವರಧಮರೆಲೆ ಕಲಿಪಾರ್ಥ ಕೇಳೆಂದ ||

ಈಪರಿಯ ವರಬುದ್ಧಿ ತನಗು
ಳ್ಳಾಪುರುಷನೀಸುಕೃತದುಷ್ಕೃತ
ರೂಪುಗಳನೆರಡುವನು ಬಿಡುತಿಹನದು ನಿಮಿತ್ತದಲಿ |
ಆಪರಮವಹ ಯೋಗಕೋಸುಗ
ನೀ ಪ್ರಯತ್ನವ ಮಾಡು ಯೋಗದ
ರೂಪು ಕೇಳಾಫಲವ ಬಿಟ್ಟಿಹ ಜಾಣತನವೆಂದ ||

ಬುದ್ಧಿಯುಕ್ತರು ಕರ್ಮದಿಂದ ಸ
ಮೃದ್ಧವಾಗಿಹ ಫಲದ ಭೋಗವ
ಹೊದ್ದದೆಯೆ ನೆರೆ ಬಿಟ್ಟು ತತ್ವಜ್ಞಾನ ನಿಷ್ಠೆಯಲಿ |
ಇದ್ದವರುಗಳು ಜನ್ಮಬಂಧವ
ಗೆದ್ದು ಬಿಡುಗಡೆವಡೆದು ಕ್ಷುದ್ರೋ
ಪದ್ರವಿಲ್ಲದೆ ನಿಜವನೈದುವರೆಂದನಸುರಾರಿ ||

ನಿನ್ನಮತಿ ಯಾವಾಗ ಕೇಳೀ
ಭಿನ್ನಮಾಯಾಗುಣದ ಕಡಲನು
ಉನ್ನತದ ವರಬೋಧೆಯಿಂ ದಾಂಟುವುದೊ ತಕ್ಷಣದಿ |
ಮುನ್ನ ನೀ ಕೇಳ್ದುದಕೆ ನೀಮುಂ
ದಿನ್ನುಕೇಳುವುದಕ್ಕೆ ಮಿಗೆ ನಿ
ರ್ವಿಣ್ಣನಹೆಯೈ ಪಾರ್ಥ ಎಂದನು ದಾನವಧ್ವಂಸಿ ||

ಹಲವು ಶ್ರುತಿಗಳ ಕೇಳಿ ಪರಿಪರಿ
ಚಲಿಪ ನಿಸ್ಸಯ ಬುದ್ಧಿಯಿನಿಸಃಂ
ಚಲಿಸದೇತದ್ವಾಸನೆಯ ವಿಪರೀತಭಾವನೆಯ |
ಕಳೆದು ಬ್ರಹ್ಮಸಮಾಧಿಯಲಿ ನಿ
ಶ್ಚಲಿತದಿಂ ನಿಂದಾಗ ನೆರೆ ನಿ
ರ್ಮಲವೆನಿಪ ವರಯೋಗಸಿದ್ಧಿಯ ಪಡೆವೆ ನೀನೆಂದ ||

ಪರಮಸಾಂಖ್ಯವ ಬುದ್ಧಿಯೋಗವ
ಕರುಣಿಸದೆ ಕಮಲಾಕ್ಷ ಬುದ್ಧಿಯ
ಭರವ ನೆಲೆವಿಡಿದಾಸ್ಥಿರಪ್ರಜ್ಞನು ಸಮಾಧಿಯಲಿ |
ಇರುತಲೇನನು ನುಡಿವ ಕುಳ್ಳಿಹ
ಪರಿಯದಾವುದದೆಂತು ನಡೆವನು
ಹಿರಿಯರೇನೆಂದೆಂಬರದ ಹೇಳೆಂದನಾಪಾರ್ಥ ||

ಮನದಲಿಹ ಬಯಕೆಗಳನೆಲ್ಲವ
ನೆನೆಯದಾವಾಗಲು ಬಿಡುವನಾ
ತ್ಮನಲಿ ನಿಷ್ಠಿತನಾಗಿ ಪರಮಾನಂದಮಯವೆನಿಪ |
ಚಿನುಮಯನೊಳೊಡಗೂಡಿ ತುಷ್ಟಿಯ
ಘನತೆಯಿಂದಿಹನಾವನಾತನೆ
ಮುನಿಗಳಾದರಿಪಾಸ್ಥಿರಪ್ರಜ್ಞನು ವಿಚಾರಿಸಲು ||

ಹೆದರದೀತಾಪತ್ರಯಂಗಳ
ಪದದ ನಾನಾದುಃಖದಲಿ ನೆರೆ
ಮುದದಲಾಸಕ್ತಿಯನು ಮಾಡದೆ ಕರಣಮೂರರಲಿ |
ಉದಿತಕಾಮಕ್ರೋಧಭೀತಿಯ
ನೊದೆದು ಬಿಟ್ಟಮುನೀಶ್ವರನು ತಾ
ವಿದ್ಯುಗಳಿಂ ಸ್ಥಿರಬುದ್ಧಿಯೆನಿಸುವನೆಂದನಸುರಾರಿ ||

ಆವನೊಬ್ಬಸವುಸ್ತವಸ್ತುಗು
ಣಾವಳಿಗಳಲಿ ಮಮತೆಯಿಲ್ಲದೆ
ಜೀವಿಸನು ಪ್ರಾರಬ್ಧವಶದಿಂ ಬಂದಲೇಸಿನಲಿ |
ಭಾವದಿಂ ಹಾರೈಸಿ ಪೊಲ್ಲೆಹ
ತಾವಿನಲಿ ದುಃಖಿಸನು ತಿಳಿಯಲಿ
ಕಾವಿವೇಕಿಯ ಪ್ರಜ್ಞೆನೆಲೆಯೆನಿಸುವುದು ಕೇಳೆಂದ ||

ನಡೆಯುತಿಹ ಕೂರುಮನು ತನ್ನಯ
ಒಡಲೊಳಗೆ ಕೈಕಾಲನೆಲ್ಲವ
ನಡಗಿಸುವವೋಲಿಂದ್ರಿಯಂಗಳ ವಿಷಯದಲ್ಲಿಂದ |
ಅಡಿಗಡಿಗೆ ತೆಗೆತೆಗೆದು ತನ್ನಲಿ
ದೃಢದಿ ನಿಲಿಸುವನಾವನಾತನ
ಬಿಡದೆ ತೋರುವ ಪ್ರಜ್ಞೆನೆಲೆಯೆನಿಸುವುದು ಕೇಳೆಂದ ||

ರುಜೆಯುಡಸಲಾಹಾರವಿಲ್ಲದೆ
ನಿಜವರಿಯದಾತಂಗೆ ವಿಷಯ
ವ್ರಜತೊಲಗುವುದು ತನ್ನಲಿರುತಿಹ ಬಯಕೆ ಪೊರಗಾಗೆ |
ವಿಜಯ ಕೇಳಾಬಯಕೆ ವಿಷಯ
ವ್ರಜಸಹಿತ ತೊಲಗುವುದು ತನ್ನೀ
ನಿಜವನರಿದಿಹ ವರಮುನಿಗೆ ಕೇಳೆಂದನಸುರಾರಿ ||

ವರಮುಕುತಿಗೋಸುಗರ ಯೋಗವ
ನಿರದೆಯಭ್ಯಾಸವನು ಮಾಡುವ
ಗರುವ ಪುರುಷನ ಮನವ ಮುಂತಾಗೆಳೆದು ಬಲುಪಿನಲಿ |
ತಿರುಹುವುದು ವಿಷಯಂಗಳಲ್ಲಿಗೆ
ದುರುಳ ಕರಣಸಮೂಹವಿದು ನೆರೆ
ಮರುಳುಗೊಳಿಸುವುದಾರನಾದರು ಪಾರ್ಥ ಕೇಳೆಂದ ||

ಅದುನಿಮಿತ್ತಖಿಲೇಂದ್ರಿಯಂಗಳ
ಮದವ ಮುರಿದು ನಿರೋಧಿಸುತಲತಿ
ಮುದದಿ ಯೋಗಾಭ್ಯಾಸದಿಂದೆನ್ನಲ್ಲಿ ಭಕ್ತಿಯನು |
ಒದವಿಸುತಲಿರಲಿಂದ್ರಿಯಂಗಳು
ತುದಿಯಲಾವನ ವಶವಹವು ಕೇಳ್
ಬುಧರ ಮತದಿಂದಾಮಹಾತ್ಮಂಗಿರದೆ ನೆಲೆಯಹುದು ||

ವಿಷಯಹಲವನು ನೆನೆವ ಮನುಜಗೆ
ವಿಷಯದಲ್ಲಿಯ ಸಲುಗೆ ಪುಟ್ಟುಗು
ವಿಷಯಸಂಗದದೆಸೆಯಲುದಿಸುಗು ಕಾಮಿಸುವ ಶಕ್ತಿ |
ಹೊಸಪರಿಯ ಕಾಮನು ನೆರೆ ಬಂ
ಧಿಸಲಿಕದರಿಂ ಕ್ರೋಧ ಸಲೆ ಜನಿ
ಯಿಸುವುದೈ ಕೇಳೆಂದನಸುರಾರಾತಿ ಫಲುಗುಣನ ||

ಅದರಿನವಿವೇಕವು ಜನಿಯಿಸುವು
ದದರದೆಸೆಯಿಂ ಸಕಲಶಾಸ್ತ್ರದ
ಲೊದವಿದಾಸ್ಮೃತಿ ಕೆಡುವುದಾಸ್ಮೃತಿ ಕೆಡಲಿಕಾಬಳಿಕ |
ತುದಿಗೆ ನಿಶ್ಚಯಜ್ಞಾನ ಕೆಡುತಿಹು
ದದು ಕೆಡಲು ಬಳಿಕಾತ ಮೋಕ್ಷದ
ಪದವ ಪಡೆಯದೆ ಕೆಟ್ಟುಹೋದನು ಪಾರ್ಥ ಕೇಳೆಂದ ||.

ಅದುನಿಮಿತ್ತ ಮುಮುಕ್ಷುವಾದವ
ನುದಿತಕಾಮಕ್ರೋಧವಳಿದುಳಿ
ದೊದವಿ ತನ್ನಯಧೀನವಾದಿಂದ್ರಿಯ ನಿಕರದಿಂದ ||
ವಿಧಿವಿಹಿತ ವಿಷಯಂಗಳನು ತಾ
ಹದುಳದಿಂ ಭೋಗಿಸುವ ಚಿತ್ತನು
ಸದಮಳದ ಶಾಂತಿಯನು ಪಡೆವನು ಪಾರ್ಥ ಕೇಳೆಂದ ||

ಪರಮಶಾಂತಿಯು ಪಡೆದು ತಾನತಿ
ಹರುಷದಿಂದಿಹ ಮುನಿಗೆ ದುಃಖದ
ನೆರವಿಗಳು ನೆರೆ ಕೆಟ್ಟುಹೋಹುವು ನಿಮಿಷಮಾತ್ರದಲಿ |
ನಿರುತ ನಿರ್ಮಲ ಚಿತ್ತನಾಗಿಹ
ಪರಮಯೋಗಿಗೆ ಶುದ್ಧಚಿತ್ತದಿ
ಪರಮತತ್ವಜ್ಞಾನ ನೆಲಸಿಹುದೆಂದನಸುರಾರಿ ||

ನಿರುತದಿಂ ಶಾಸ್ತ್ರಾರ್ಥವರಿಯ.ದ
ನರಗೆ ದೊರಕದು ಯೋಗವದು ತಾ
ದೊರಕದಿಹ ಮನುಜಂಗೆ ಮನನಾದಿಗಳು ಸಿದ್ಧಿಸವು |
ವರಮನನಶೂನ್ಯಂಗೆ ದೊರಕದು
ಪರಮಶಾಂತಿಯು ಶಾಂತಿ ದೊರಕದ
ನರಗೆ ಸುಖವೆಲ್ಲಿಯದು ಕೇಳೆಂದನು ಮುರಧ್ವಂಸಿ ||

ವಿಷಯದಭಿಮುಖದಿಂದ್ರಿಯಂಗಳ
ವಶವೆನಿಸುತಿಹುದಾವನೊಬ್ಬನ
ಸಸಿನಿರದ ಮನವವನ ಪ್ರಜ್ಞೆಯನಿರದದುರೆಕೆಡಿಸಿ |
ದೆಸೆಗೆಡಿಸುವುದು ಕೇಳದೆಂತೆನೆ
ಪಸರಿಸಿದ ಶರಧಿಯೊಳು ನಾವೆಯು
ವಿಷಮಮಾರುತವೆಳೆದೊಯಿದು ಮುರಿದಿಕ್ಕುವಂದದಲಿ ||

ಆದುಸಿಮಿತ್ತದೊಳಾವನೊಬ್ಬನು
ಒದವಿದಿಂದ್ರಿಯಗಳನು ವಿಷಯದ
ಸದನದಿಂ ಬರಸೆಳೆದು ನೆರೆ ನಿಗ್ರಹಿಸಿ ಕೊಂಡಿಹನು |
ಅದರಿನಾತನ ಬುದ್ಧಿತತ್ವದ
ಪದವಿಯಲಿ ನೆಲೆಗೊಂಬುದವನನು
ಬುಧರು ಸುಸ್ಥಿರಬುದ್ಧಿಯೆಂಬರು ಪಾರ್ಥ ಕೇಳೆಂದ ||

ಆವುದೊಂದ ಅಭೇದದೃಷ್ಟಿಯ
ಭಾವದಮಳಜ್ಞಾನಜ್ಯೋತಿಯೊ
ಜೀವರಿಗೆ ಕರ್ತೃತೆಯದರಲೆಚ್ಚತ್ತಿಹನುಯೋಗಿ |
ಆವ ಭೂತಂಗಳಿಗೆ ಭೇದದ
ಭಾವದೆಚ್ಚರು ತಾನಿಹುದೊ ಸ
ದ್ಭಾವವನು ತಿಳಿದಿಹ ಮುನಿಗೆ ಕರ್ತೃತೆಯದೆನಿಸುಪುದು ||

ತುಂಬಿ ಚಲಿಸದೆ ಸ್ಥಿರವೆನಿಸುತಿ
ರ್ಪ್ಪಂಬುಧಿಯನುದಕೌಘ ನೆರೆ ಬೊ
ಕ್ಕಿಂಬುಗೊಂಡೇಕತ್ವವನು ಪಡೆವಂತೆ ಬಯಕೆಗಳು |
ಸ್ತಂಭಿಸುವುವಾವನಲತಾನೇ
ಬೆಂಬಿಡದೆ ಮೋಕ್ಷವ ಪಡೆದು ವಿಷ
ಯಾಂಬುಧಿಯಲಾಡುವನು ಶಾಂತಿಯನೈದಿ ಕೇಳೆಂದ ||

ವಿಷಯವೆಲ್ಲವ ಬಿಟ್ಟು ನೆರೆ ನಿ
ರ್ವಿಷಯವೆನಿಪಾಹಮ್ಮಮತೆಗಳ
ದೆಸೆಯ ಹೊದ್ದದೆ ಜ್ಞಾನಿ ತಾನಹೆನೆಂಬ ಹಮ್ಮಳಿದು |
ಸಸಿನೆ ಚಲಿಸದೆ ನಿಸ್ಪೃಹತೆಯಿಂ
ದೆಸೆಯುತಿಹ ವರಯೋಗಿ ತಾ ನೆರೆ
ಹೊಸತೆನಿಪ ಮುಕ್ತಿಯನು ಪಡೆವನು ಪಾರ್ಥ ಕೇಳೆಂದ ||

ಈ ಪರಿಯ ವರಸಾಂಖ್ಯಯೋಗದ
ರೂಪು ಬ್ರಹ್ಮದ ನಿಷ್ಠೆ ಯಿದರನು
ರೂಪಿನಲಿ ನೆಲೆಗೊಂಡವನು ಮರೆದಿರನು ನಿಜಪದವ |
ಆಪರಮನಿಷ್ಠೆಯಲಿ ನೆಲೆಗೊಂ
ಡಾಪುರಷನವಸಾನಕಾಲದ
ಲಾಪರಬೊಮ್ಮವನು ಪಡೆವನು ಪಾರ್ಥ ಕೇಳೆಂದ ||

— ಇಂತು ಸಾಂಖ್ಯಯೋಗವೆಂಬ ದ್ವಿತೀಯಾಧ್ಯಾಯಂ ಸಂಪೂರ್ಣಂ —

# ತೃತೀಯಾಧ್ಯಾಯಂ

ಸೂಚನೆ || ವೀರಪಾರ್ಥಂಗಖಿಳಭುವನಾ
ಧಾರ ಹರಿ ಕರುಣದಲಿ ಶ್ರುತಿಗಳ
ಸಾರವಹ ಸತ್ಕರ‍್ಮಯೋಗವನೊಲಿದು ಬೋಧಿಸಿದ ||

ಎಲೆಜನಾರ್ದನ ಬುದ್ಧಿಯೋಗವು
ಹೊಲಬುಗೆಡಿಸುವ ಕರ‍್ಮದಿಂ ತಾ
ನೆಲಗೆ ಮಿಗಿಲಾದರೆಯದೇತಕೆ ಕರ‍್ಮಯೋಗದಲಿ |
ಚಲಿಸದೆನ್ನನು ಬೋಧಿಸುತಲಿಹೆ
ಹಲವು ಕರ‍್ಮದ ಹೊರೆಯೆನಿಸುವಾ
ಬಲೆಯೊಳಗೆ ಸಿಲುಕಿಸುವುದುಚಿತವೆ ಯೆಂದನಾಪಾರ್ಥ ||

ದೇವ ಸಂದೇಹದ ವಚನದಿಂ
ದೀವಿಮಲವಾದೆನ್ನ ಮತಿಯನು
ಭಾವಿಸಲು ಮೋಹಿಸುತಲಿಹೆ ನೀನದುನಿಮಿತ್ತದಲಿ |
ಆವಮತದಿಂದಾನು ಲೇಸನು
ಭಾವದಿಂದೈದುವೆನದೊಂದನು
ಸೀವೆನಗೆ ನಿರ್ಧರಿಸಿ ಬೆದಸುವುದೆಂದನಾಪಾರ್ಥ ||

ವರಧನಂಜಯ ಪೂರ್ವದಲಿ ನಾ
ನೊರೆದೆ ಮೋಕ್ಷೋಪಾಯವನು ಕೇ
ಳೆರಡುಪರಿಯಲದೆಂತೆನಲು ನಿಜಸಾಂಖ್ಯನಿಷ್ಠರಿಗೆ |
ವರಮುಕುತಿಗಾಬುದ್ಧಿಯೋಗವು
ದೊರಕುವುದು ಮೋಕ್ಷಾರ್ಥಿಗಳಿಗ
ತ್ಯುರುತರದ ಸತ್ಕರ್ಮದಿಂ ಕೈವಲ್ಯವಹುದೆಂದ ||

ಕರ್ಮವನು ಜಡಭಾವವಂ ನೆರೆ
ನೆಮ್ಮಿ ಮಿಗೆ ಮಾಡದ ಪುರುಷನೀ
ಕರ್ಮಪದವಹ ಮುಕ್ತಿಯನು ತಾನೈದ ಮುದದಿಂದ |
ಕರ್ಮಚಯಸನ್ಯಾಸಮಾತ್ರದಿ
ನಿರ್ಮಲದ ಸುಜ್ಞಾನವಿಲ್ಲದೆ
ಧರ್ಮವಹ ಪರತತ್ವವನು ತಾನೈದ ಕೇಳೆಂದ ||

ಒಂದುಕ್ಷಣ ಕರ್ಮವನು ಮಾಡದೆ
ನಿಂದಿರನು ಕೇಳಾವಮರ್ತ್ಯನು
ಸಂದಮಾಯೆಯು ಗುಣಗಳಿಂದೀತೋರ್ಪಜಗವೆಲ್ಲ |
ಬಂದಿ ಪರವಶತೆಯನು ಘನನಿ
ರ್ಬಂಧದಿಂ ಕರ್ಮವನು ಮಾಡುವು
ದಿಂದುನಿನ್ನಿನದಲ್ಲನಾದಿಯ ವಿದ್ಯೆ ಕೇಳೆಂದ ||

ಈ ಸಕಲ ಕರ್ಮೇಂದ್ರಿಯಂಗಳ
ಸೂಸಲೀಯದೆ ನಿಲಿಸಿ ಪೂರ್ವದ
ವಾಸನೆಯ ಬಲುಹಿಂದ ಬಕನಂದದಲಿ ಮನದೊಳಗೆ |
ಆ ಸಕಲವಿಷಯವನು ನೆನೆಯುತ
ಲೇಸು ತಪವನು ವಿರಚಿಸಿದೊಡಂ
ದೋಷ ಮೂಢನು ತಿಳಿಯೆ ಮಿಥ್ಯಾಚಾರಿಯೆನಿಸುವನು ||

ಆವನೀಜ್ಞಾನೇಂದ್ರಿಯಂಗಳ
ನಾವಿಷಯದಿಂ ತೆಗೆದು ಮನದಲಿ
ಭಾವಿಸದೆ ನಿಗ್ರಹಿಸಿ ನಿಜಯೋಗದಲಿ ನೆಲೆಗೊಳಿಸಿ ||
ಈ ವಿವಿಧಗುಣಕರ್ಮಯೋಗವ
ನಾವ ಫಲದಾಸಕ್ತಿಯಿಲ್ಲದೆ
ಭಾವದಿಂ ಮಾಡುವವನುತ್ತಮನೆಂದನಸುರಾರಿ ||

ವಿಹಿತಕರ್ಮವ ಮಾಡು ಸುಮ್ಮನೆ
ಯಿಹುದರಿಂ ಕರ್ಮವನು ಮಾಡುತ
ಲಿಹುದು ತಾನತ್ಯಧಿಕ ಕರ್ಮವ ಬಿಟ್ಟಿಹುದರಿಂದ |
ಇಹದ ನಿನ್ನ ಶರೀರಯಾತ್ರೆಯು
ಬಹಳಸುಖ ಮುಂತಾಗಿ ಸಿದ್ಧಿಸ
ದಿಹಪರಕೆ ಸತ್ಕರ್ಮವೇ ಹಿತವೆಂದನಸುರಾರಿ ||

ಈ ಸಕಲಜನವೀಶ್ವರಾರ್ಪಣ
ಕೋಸುಗವೆ ವಿರಚಿಸುವ ಕರ್ಮದ
ಲೇಸ ನೆರೆಬಿಟ್ಟುಳಿದ ಕರ್ಮದಿ ಬದ್ಧವಾಗಿಹುದು |
ಆಸೆಯನು ಬಿಟ್ಟದುನಿಮಿತ್ತದ
ಲೀಸಕಲ ಕರ್ಮಂಗಳನು ಜಗ
ದೀಶ್ವರಾರ್ಪಿತವಾಗಿ ನೀ ಮಾಡೆಂದನಸುರಾರಿ ||

ಅಜನು ಮುನ್ನವೆ ಯಜ್ಞಸಹಿತೀ
ಪ್ರಜೆಗಳನು ನಿರ್ಮಿಸಿ ನಿಮಗೆ ಯಾ
ಯಜನದಿಂ ಸಂತಾನವಾಗಲಿ ನೀವು ಬಯಸಿದುದ |
ಯಜನ ತಾನೇ ಕೊಡುವುದಾಗಲಿ
ವಿಜಯರಾಗಿಹುದೆಂದನಾಕಮು
ಲಜನ ಕಥನದಿನಾದುದದು ಕೇಳೆಂದನಸುರಾರಿ ||

ದೇವರನು ನೀವ್ ಯಜ್ಞದಿಂದಲಿ
ಸೇವಿಸಲು ಸಂತುಷ್ಟರಾಗಿಹ
ದೇವರಿಷ್ಟವ ಕೊಟ್ಟು ನಿಮ್ಮನು ತುಷ್ಟಿಬಡಿಸುವರು |
ದೇವತೆಗಳನು ನೀವು ನಿಮ್ಮನು
ದೇವತೆಗಳಿಂತೊಬ್ಬರೊಬ್ಬರ
ಭಾವಿಸಲು ನೀವುಭಯರುಂಕಡುಲೇಸನೈದುವಿರಿ ||

ಇಷ್ಟಭೋಗಂಗಳನು ಯಜ್ಞದಿ
ತುಷ್ಟರಹ ದೇವರು ನಿಮಗೆ ಸಂ
ತುಷ್ಟಿಯಿಂದಲಿ ಕೊಡಲು ಕೊಟ್ಟುದನವರಿಗರ್ಪಿಸದೆ |
ಕೆಟ್ಟತನದಿಂ ಭೋಗಿಸುತಲಿಹ
ದುಷ್ಟನೀಲೋಕದಲಿ ತಾನು
ತ್ಕೃಷ್ಟದೈವಸ್ವಾಪಹಾರದ ಕಳ್ಳನೆನಿಸುವನು ||

ಪರಮಯಜ್ಞದ ಶೇಷವನು ತಾ
ವಿರದೆ ಭುಂಜಿಪ ಸಂತರುಗಳೀ
ದುರಿತಬಂಧನದಿಂದ ನೆರೆ ಬಿಡುಗಡೆಯನೈದುವರು |
ನಿರುತದಿಂದಲೆ ಸ್ವೀಯಕುಕ್ಷಿಂ
ಭರರು ಸ್ವಾರ್ಥವ ತಿಳಿಯದಿರುತಿಹ
ನರಕಿಗಳು ಪಾಪವನೆ ಉಂಬರು ಪಾರ್ಥಕೇಳೆಂದ ||

ಅನ್ನದಿಂ ಪ್ರಾಣಿಗಳು ಜನಿಸುವ
ರನ್ನವೆಂತುದಯಿಸುವುದೆನೆ ಪ
ರ್ಜನ್ಯನಿಂ ಪರ್ಜನ್ಯತಾನುದಯಿಸುವುದೆಂತೆನಲು |
ಸನ್ಮತಿಯೆ ಕೇಳ್ಯಜನದಿಂ ಪ
ರ್ಜನ್ಯನುದಿಸುವುದದು ಯಜನಸಂ
ಪನ್ನಸತ್ಕರ್ಮದಲಿ ಜನಿಸುಗುಪಾರ್ಥ ಕೇಳೆಂದ ||

ಇಂತೆನಿಪ ಸತ್ಕರ್ಮವಾಶ್ರುತಿ
ಸಂತತಿಗಳಿಂ ಜನಿಸುವುದು ಶ್ರುತಿ
ಸಂತತಿಗಳಾವರ ಪರಬ್ರಹ್ಮದಲಿ ಜನಿಸುವುವು |
ಇಂತು ಕಾರಣಪೂರ್ವವನು ನಿ
ಶ್ಚಿಂತವರುಪುವ ಸಕಲಶ್ರುತಿಗಳು
ಸಂತತವು ಯಜ್ಞದಲಿ ನೆಲೆಯಾಗಿಹುವು ಕೇಳೆಂದ ||

ಈಪರಿಯು ವರ್ತಿಸುವ ಕರ್ಮಕ
ಲಾಪವನು ನೆರೆಬಿಟ್ಟು ಮಾನವ
ರೂಪಿನೊಳು ಸಿಲುಕಿರ್ದು ಮಿಗೆ ವಿಷಯಾಭಿಮುಖನಾಗಿ |
ವ್ಯಾಪಿಸಿರುವಿಂದ್ರಿಯದೊಡನೆ ತ
ದ್ರೂಪದಲಿ ಕ್ರೀಡಿಸುತಲಿರುತಿಹ
ಪಾಪಿ ಜೀವನ್ಮುಕ್ತನೆನಿಸನು ಪಾರ್ಥ ಕೇಳೆಂದ ||

ಆವನೊಬ್ಬ ಮಹಾಪುರುಷನೀ
ಜೀವಭಾವವ ಬಿಟ್ಟು ಆತ್ಮನ
ಭಾವಿಸುವನತಿಪ್ರೀತಿಯಿಂ ಪರಮಾತ್ಮತೃಪ್ತಿಯಲಿ |
ಪಾಪನನು ತನ್ನಲ್ಲಿ ತಾನೇ
ರೂವಳಿದ ಸಂತೋಷಿ ಯಾತನ
ಢಾವ ಪರಿಯಲಿ ಕೂಡಿ ಮಾಡುವ ಕರ್ಮವಿಲ್ಲೆಂದ ||

ಆ ಮಹಾಪುರುಷಂಗೆ ಕರ್ಮವ
ಪ್ರೇಮದಿಂ ಮಾಡುವದರಿಂ ಬಹ
ಕಾಮಿತದ ಲೇಸಿಲ್ಲ ಮಾಡದೆ ಬಿಟ್ಟಹುದರಿಂದ |
ತಾಮಸದ ಕೇಡಿಲ್ಲ ಭೂತ
ಸ್ತೋಮದಲಿ ತಾ ಬಯಸುವರ್ಥದ
ಕಾಮವಾತಂಗಿಲ್ಲ ವೆಲೆಕಲಿಪಾರ್ಥ ಕೇಳೆಂದ ||

ಎಲೆಧನಂಜಯ ವಿಹಿತಕರ್ಮವ
ಫಲದ ಬಯಕೆಯ ಬಿಟ್ಟು ಮಾಡುವ
ಸಲೆ ಮನುಜನೈದುವನು ಬ್ರಹ್ಮವನದುನಿಮಿತ್ತದಲಿ |
ಫಲದ ಬಯಕೆಯ ಬಿಟ್ಟು ನಿಷ್ಠೆಯ
ಕುಲವಿಹಿತವಹ ಕರ್ಮವನು ನೀ
ನೊಲಿದು ಸಂತತ ಮಾಡುತಿರೆ ಲೇಸಹುದು ನಿನಗೆಂದ |

ಕರ್ಮದಿಂ ಜನಕಾದಿಗಳು ಕೇ
ಳ್ನಿರ್ಮಲದ ಸಿದ್ಧಿಯನು ಪಡೆದರು
ದುರ್ಮದವ ನೆರೆಬಿಟ್ಟುಕರ್ಮವನವರ ಚಂದದಲಿ |
ಧರ್ಮವೆಂದೇ ಮಾಡು ಅಥವಾ
ಹಮ್ಮು ವಿಡಿದಿಹ ಲೋಕಕೋಸುಗ
ಬೊಮ್ಮವನು ನೀನರಿದೊಡಂ ಮಾಡುವುದುಚಿತವೆಂದ ||

ಆವುದಾವುದನುತ್ತಮರು ನಿ
ತ್ಯಾವಳಿಯೊಳಾಚರಿಪರದನೇ
ತಾವು ಬಿಡದಾಚರಿಸುವರು ಮಾನವರು ಮುದದಿಂದ
ಆವನುತ್ತಮಪುರುಷ ತಾಬಳಿ
ಕಾವಮತದಲಿ ನಡೆಯುತಿಹನದ
ಭಾವಿಸುತ ಮನುಜರುಗಳನು ವರ್ತಿಸುತಲಿಹರೆಂದ ||

ಎಲೆಧನಂಜಯ ಮೂರುಲೋಕಂ
ಗಳೊಳೆನಗೆ ನೆರೆ ಮಾಡಬೇಡಿದ
ಹಲವುಕ್ರಿಯೆ ತಾನಿಲ್ಲ ಪಡೆಯುದವಸ್ತುತಾನಿಲ್ಲ |
ಬಲವಿನಿಂ ಮುಂದೈದೆ ಬೇಡುವ
ಫಲವು ತಾನಿಲ್ಲಾದೊಡೆಯು ನಾ
ಕುಲವಿಹಿತಕರ್ಮಂಗಳಲಿ ವರ್ತಿಸುತಲಿಹೆನೆಂದ ||

ಅಲಸದಾನೀಗಖಿಲಕರ್ಮವ
ನೆಲಗೆ ಮಾಡುವೆ ಮಾಡುತಿರುತಿ
ರ್ದಲಸಿದಾಕ್ಷಣ ಬಿಟ್ಟೆನಾದಡೆ ಬಳಿಕ ಮಾನವರು |
ಹಲವು ಮಾತೇನೆನ್ನನೀಕ್ಷಿಸಿ
ಕುಲವಿಹಿತಕರ್ಮವನು ಬಿಡುವರು
ಚಲಿಸಿ ಬಿಡಲವರುಗಳು ನರಕವನೈದದಿರರೆಂದ ||

ನಿರುತ ಕರ್ಮವ ಮಾಡದೆಯು ತಾ
ನಿರಲು ಈ ಮನುಜರುಗಳೆಲ್ಲರು
ಭರವಸದಿ ನೆರೆ ಕೆಟ್ಟುಹೋಹರು ಜಾತಿಸಂಕರವ |
ಇರದೆ ನಾನೇ ಮಾಡಿದವನಹೆ
ನರರನೆಲ್ಲರ ಕರ್ಮದಿಂ ವ್ಯಭಿ
ಚರಿಸಿ ಕೊಂದವನಪ್ಪೆನಾ ಕಲಿಪಾರ್ಥ ಕೇಳೆಂದ ||

ಅಜ್ಞರೀವರದಾನತಪಗಳ
ಯಜ್ಞಕರ್ಮಂಗಳ ಫಲವೇ
ದಾಜ್ಞೆಯಿಂ ಬಯಸುತ್ತಮಾಳ್ಪರು ಜ್ಞಾನವುಳ್ಳರು |
ಪ್ರಜ್ಞೆಯಿಂದಾಫಲವ ಬಯಸದೆ
ಯಜ್ಞಕರ್ಮಂಗಳನು ಮಾಡುವ
ರಜ್ಞಲೋಕದನುಗ್ರಹಾರ್ಥಕೆ ಪಾರ್ಥ ಕೇಳೆಂದ ||

ಪರಮತತ್ವವ ಬಲ್ಲ ಬುಧರನ
ವರತಕರ್ಮವ ಮಾಡುತಿರುವ
ಜ್ಞರಿಗೆ ಕರ್ಮವ ಬಿಡುವ ಬುದ್ಧಿಯ ಭೇದಮಾರ್ಗವನು |
ಒರೆಯಲಾಗದು ಕರ್ಮವನು ತಾ
ನಿರುತದಿಂದಾಸಕ್ತಿಯಿಲ್ಲದೆ
ಚರಿಸುತವೆ ಮೂರ್ಖರನು ಕರ್ಮವ ಮಾಡಿಸುವುದೆಂದ ||

ದುರುಳತನದಭಿಮಾನದಿಂ ಸಂ
ಚರಿಸುವಾತನು ಪ್ರಕೃತಿಯಿಂದಹ
ಪಿರಿದು ಸತ್ವರಜಸ್ತಮಸ್ಸುಗಳೆಂಬ ಗುಣದಿಂದ |
ಭರದಿ ಮಾಡುವ ಕರ್ಮವೆಲ್ಲವ
ಮರುಳ ತಾನೇ ಮಾಡುತಿಹೆನೆಂ
ದಿರದೆ ಬಗೆವನು ಲೋಕದಲಿ ಕಲಿಪಾರ್ಥ ಕೇಳೆಂದ ||

ಎಲೆಧನಂಜಯ ಈ ಗುಣಂಗಳ
ಹಲವು ಕರ್ಮಂಗಳ ವಿಭಾಗದ
ನೆಲೆಯ ಬಲ್ಲ ಮಹಾಪುರುಷನೀವಿಷಯವೈದರಲಿ |
ಒಲವಿನಿಂ ಪಂಚೇಂದ್ರಿಯಂಗಳು
ಸಲೆ ಚರಿಸುತಿಹುವೆಂದು ಹಮ್ಮಿನ
ಬಲೆಯೊಳಗೆ ತಾ ಸಿಲುಕನ್ವೆಯೆಲೆಪಾರ್ಥ ಕೇಳೆಂದ ||

ತಾಮಸದ ಪ್ರಕೃತಿಯಲಿ ಗುಣ ದು
ಷ್ಕಾಮ ಮೂಢರು ತ್ರಿಗುಣ ಕರ್ಮ
ಸ್ತೋಮದಲಿ ಕರ್ತೃತ್ವದಿಂದಾಸಕ್ತರಾಗಿಹರು |
ಆವರುಳರನು ವೇದಶಾಸ್ತ್ರದ
ಸೀಮೆಯನು ಬಲ್ಲವರು ಕರ್ಮವ
ನೇಮದಿಂ ಸಲೆಬಿಡಿಸಲಾಗದು ಪಾರ್ಥ ಕೇಳೆಂದ ||

ಎಲೆಧನಂಜಯ ಸಕಲಕರ್ಮವ
ನೊಲವಿನಿಂದೆನ್ನಲಿ ಸಮರ್ಪಿಸಿ
ಸಲೆ ಪರಮತತ್ವವನರಿವ ಮತಿಯಿಂದ ವಿಷಯದಲಿ |
ಬಲಿದ ಬಯಕೆಯ ಬಿಟ್ಟು ಮಮತೆಯ
ಗೆಲಿದು ಶೋಕಾದಿಗಳನೈದದೆ
ಕಲಹಕುದ್ಯೋಗವನು ಮಾಡೇಳೆಂದನಸುರಾರಿ ||

ಆರುಕೆಲರೀಯೆನ್ನ ಮತದಲಿ
ಸಾರಸತ್ಕರ್ಮವನು ಶಾಸ್ತ್ರವಿ
ಚಾರದಿಂದನುಸರಿಸಿ ನೆರೆ ಸದ್ಗತಿಯನೈದುವರು |
ಬೇರೆಮಾತೇನಿನ್ನು ಮಾಡುವ
ಧೀರರವರಸೂಯರಾಗಿರೆ
ಘೋರವಹ ಕರ್ಮಂಗಳಿಂ ಬಿಡುಗಡೆಯನೈದುವರು ||

ಇನ್ನು ನೀಕೇಳಾರು ಕೆಲಬರು
ಎನ್ನ ಮತವಹ ಕರ್ಮಯೋಗವ
ಭಿನ್ನಹಾದಿಯಸೂಯತನದಿಂ ಭಜಿಸದಿರುತಿಹರು |
ಧನ್ಯಶಾಸ್ತ್ರಜ್ಞಾನವಿಲ್ಲದೆ
ಬನ್ನಬಡುತಿಹ ಮತಿವಿಹೀನರು
ಮುನ್ನವೇ ನೆರೆ ಕೆಟ್ಟರೆಂದರಿಯೆಂದನಸುರಾರಿ ||

ತಾನು ಸತ್ವಜ್ಞಾನದನುಸಂ
ಧಾನವುಳ್ಳವನಾದೊಡೆಯು ಮುಂ
ತಾನು ಮಾಡಿದ ಪ್ರಕೃತಿಗನುಗುಣವಾಗಿ ಚೆಷ್ಟಿಪನು |
ಆಸರರುಗಳು ತಮ್ಮ ಪ್ರಕೃತಿನಿ
ಧಾನಿದಿಂದಿರುತಿಹರು ಶಾಸ್ತ್ರವಿ
ಧಾನನಿಗ್ರಹವೇನ ಮಾಡುವುದೆಂದನಸುರಾರಿ ||

ಇಂದ್ರಿಯಂಗಳು ಬಿಡದೆಳೆವ ಪಂ
ಚೇಂದ್ರಿಯಾರ್ಥಂಗಳಲಿ ಮಿಗೆಬಳಿ
ಸಂದು ರಾಗದ್ವೇಷವಿರುತಿಹುವವರಧೀನವವನು |
ಮುಂದರಂದದಲೈದಲಾಗದು
ಸಂದ ಯೋಗಾಭ್ಯಾಸಕಿವು ತಾಂ
ಸಂಬವೈರಿಗಳಾಗಿಹುವು ಕೇಳೆಂದನಸುರಾರಿ ||

ತನ್ನ ಧರ್ಮಾ ಚರಣವೇ ತನ
ಗುನ್ನತದ ಲೇಸಾದ ಕಾರಣ
ವನ್ಯಕೊರತೆಯದಾದೊಡೆಯು ಕೇಳ್ತನಗದೇ ಲೇಸು |
ಅನ್ಯಧರ್ಮವು ಕುಲಗೆಡಿಸಿ ನೆರೆ
ಬನ್ನಬಡಿಸುವುದಲ್ಲದೇ ಸಂ
ಪೂರ್ಣನೆನಿಸಿದೊಡಂ ತನಗೆ ಲೇಸಿಲ್ಲ ತಿಳಿಯೆಂದ ||

ಹರಿಯೆ ಕೇಳೀಪಾಪವನು ನರ
ಭರದಿ ಬಯಸದಿರಲ್ಕೆ ಬಲುಹಿಂ
ದರಸು ಬಿಟ್ಟಿಯು ಮಾಡುವಂಥದದಾರ ಪ್ರೇರಣೆಯಿಂ |
ಇರದೆ ಮಾಳ್ಪಂ ತನುವ ಪ್ರೇರಿಪ
ಪುರುಷನಾರೈ ಹೇಳು ವೃಷ್ಣಿಗ
ಳರಸ ಕೃಪೆಯಿಂ ಕರುಣಿಸೆಂದನು ಪಾರ್ಥ ಕೈಮುಗಿದು ||

ಎನಿತನುಂಡುಂ ದಣಿಯದಿಹನೊ
ಬ್ಬನು ಮಹಾಪಾಪಿಷ್ಠ ನೀಕಾ
ಮನು ಕಣಾ ಈಕ್ರೋಧನೆಂಬವನುಂ ರಜೋಗುಣದಿ |
ಜನಿಸಿದರು ಪರತತ್ವವಿದ್ಯೆಯೊ
ಳನುಪಮದ ಯೋಗಕ್ಕಿವಂದಿರು
ಘನತರದ ಹಗೆಯಾಗಿಹರು ಕಲಿಪಾರ್ಥ ಕೇಳೆಂದ ||

ಹೊಗೆಯ ಬಲುಹಿಂದಗ್ನಿ ಕಿಲುಬುರೆ
ನೆಗೆದಿರಲು ದರ್ಪಣವು ಮಾಸಿಂ
ದೊಗೆದ ಗರ್ಭವು ಮುಸುಕಿಕೊಂಡಿರ್ಪಂತೆ ಹೃದಯದಲಿ |
ನಿಗಮತತ್ವಜ್ಞಾನ ಕಾಮಾ
ದಿಗಳೆನಿಪ ಹಗೆಯಿಂದ ತಿಳಿದರ
ಬಗೆಗೆ ಮುಸುಕಿಸಿಕೊಂಡಿಹುದು ಕೇಳೆಂದನಸುರಾರಿ ||

ಎಲೆಧನಂಜಯ ತತ್ವವಿದರಿಗೆ
ಹಲವು ಕಾಲ ವಿರೋಧಿಯೆನಿಸುವ
ಕಲಿತವಿಷಯ ಸಮೂಹಸಮಿಧೆಗಳಿಂದ ದಣಿಯದಿಹ |
ಬಲುಹೆನಿಪ ಕಾಮಾಗ್ನಿಯಿಂ ನೆರೆ
ಸಲೆ ಮುಸುಕಿಕೊಂಡಿಹುದು ತತ್ವದ
ನೆಲೆಯೆನಿಪ ನಿಜರೂಪವಿಂಥನವೆಂದನಸುರಾರಿ ||

ನೆಗಳಿದಿಂದ್ರಿಯವೀಮನೋಬು
ದ್ಧಿಗಳು ತಾವಿವು ಮುನ್ನ ಘನನಂ
ಬುಗೆಯು ನೆಲೆವನೆ ಯೆನಿಸುತಿಹುವಿವರಿಂದ ಮನ್ಮಥನು |
ನಿಗಮಸಿದ್ಧಜ್ಞಾನವನು ತಾ
ನಗಲದೆಯೆ ನೆರೆ ಮುಸುಕಿ ಜೀವರ
ಬೆಗ್ಗಡುಗೊಳಿಸುತ್ತಿಹನು ಜಗದೊಳಗೆಂದನಸುರಾರಿ ||

ಅದುನಿಮಿತ್ತ ಜ್ಞಾನಶಾಸ್ತ್ರದ
ಪದವ ಕೆಡಿಸುವ ಕಾಮನೆಂಬೀ
ಮದಮುಖದ ಪಾಪಿಯನು ನೀಜಯಿಸುವರೆ ಮೊದಲಲ್ಲಿ |
ಒದವಿದಿಂದ್ರಿಯಗಳ ನಿರೋಧಿಸಿ
ಸದಮಲಜ್ಞಾನದಲಿ ಹೆಚ್ಚಿದ
ವಿದಿತವೈರಾಗ್ಯದಲಿವನ ಕೆಡಿಸೆಂದನಸುರಾರಿ ||

ಇಂದ್ರಿಯಂಗಳು ವಿಷಯದಿಂ ಮಿಗಿ
ಲೆಂದು ನುಡಿವರು ಇಂದ್ರಿಯಗಳ
ಬೃಂದದಿಂ ಮನವಧಿಕ ಮನದಿಂದತ್ಯಧಿಕ ಬುದ್ಧಿ |
ಇಂದ್ರಿಯಗಳಿಂ ವಿಷಯಪಂಚಕ
ದಿಂದ ಮನದಿಂ ಬುದ್ಧಿಯಿಂದಾ
ನಂದಮಯನಾತುಮನಧಿಕ ಕಲಿಪಾರ್ಥಕೇಳೆಂದ ||

ಈಪರಿಯಲಾತ್ಮನನು ಬುದ್ಧಿಯ
ರೂಪಿನಿಂದತ್ಯಧಿಕನೆಂದೇ
ದೀಪಿಸುವ ಶಾಸ್ತ್ರಾರ್ಥದಿಂ ನೆರೆ ತಿಳಿದು ಚಿತ್ತವನು |
ವ್ಯಾಪಿಸಿದದಂದದಿ ನಿರೋಧಿಸಿ
ನೀ ಪರಮಯತ್ನದಲಸಾಧ್ಯದ
ಪಾಪಿಯಾಗಿಹ ಕಾಮವೆಂಬೀಷಗೆಯ ಜಯಿಸೆಂದ ||

— ಇಂತು ಕರ್ಮಯೋಗವೆಂಬ ತೃತೀಯಾಧ್ಯಾಯಂ ಸಂಪೂರ್ಣಂ

# ಚತುರ್ಥಾಧ್ಯಾಯಂ

ಸೂಚನೆ || ಪರಮತತ್ವಜ್ಞಾನಯೋಗದ
ಪರಿಯನಾಮುರಹರನು ಪಾರ್ಥಂ
ಗೊರೆದ ಪರಿಯನು ಕೇಳು ಜನಮೇಜಯಮಹೀಪಾಲ ||

ಒದವಿದೀವರನಿತ್ಯಯೋಗದ
ಪದವ ನಾ ಪೂರ್ವದಲಿ ಪೇಳ್ದೆನು
ಮುದದಲಾಸೂರ್ಯಂಗೆ ಸೂರ್ಯನು ಬಳಿಕ ಮನುವಿಂಗೆ |
ಇದನು ತಿಳುಹಿದ ತಿಳಿದ ಮನು ಹೇ
ಳಿದನು ತಾನಿಕ್ಷ್ವಾಕುವಿಂಗೀ
ಹದನ ಕೇಳೈಪಾರ್ಥನೀನೆಂದನು ಮುರಧ್ವಂಸಿ ||

ಈಪರಿಯ ಪಾರಂಪರೆಗಳಿಂ
ದೀಪಿಸುತ್ತುರೆ ಬಂದ ಯೋಗವ
ತಾಪಸೋತ್ತಮರಾಜಋಷಿಗಳು ಬಲ್ಲರೆಲ್ಲವನು |
ಆಪರಮವರಯೋಗವಿಳೆಯೊಳು
ರೂಪಳಿದು ಬಹುಕಾಲದಿಂ ಮಿಗೆ
ಲೋಪವಾಯಿತು ಪಾರ್ಥ ನೀ ಕೇಳೆಂದನಸುರಾರಿ ||

ನೀನೆನಗೆ ಸಂಗಡಿಗನೆಂದು ನಿ
ಧಾನದಿಂ ನಿಜಭಕ್ತನೆಂದೇ
ನಾ ನಿನಗೆ ಪೂರ್ವದಲಿ ಸೂರ್ಯಂಗೊರೆದ ಯೋಗವನು |
ಜ್ಞಾನವುದಯಿಸುವಂತೆ ವೇದವಿ
ಧಾನುಗತದುತ್ತಮರಹಸ್ಯ
ಜ್ಞಾನವನು ತಿಳುಹಿದೆನು ಕೇಳೆಂದನು ಮುರಧ್ವಂಸಿ ||

ಬಿನ್ನಹವ ಮಾಡುವೆನು ಹರಿಯೇ
ನಿನ್ನ ಜನ್ಮವು ಬಳಿಕಿನದು ರವಿ
ಮುನ್ನ ತಾ ಜನಿಸಿದನು ಪೂರ್ವದಲಾವ ಪರಿಯಿಂದ |
ಉನ್ನತದ ಯೋಗವನು ಸಿನಗುಪ
ಸನ್ನ ನಾದರ್ಕಂಗೆ ನೀನಿದ
ಮುನ್ನ ಬೋಧಿಸಿದಂದವನು ನಾನರಿವೆನೆಂತೆಂದ ||

ಎಲೆಧನಂಜಯ ಎನಗೆ ನಿನಗೆಯು
ಹಲವು ಜನ್ಮಾದಿಗಳು ಹೋದವು
ಹೊಲಬನೆಲ್ಲವ ಬಲ್ಲೆ ನಾನವರಿಯೆಯೈ ನೀನು |
ಸಲೆ ಜನನ ಮರಣಗಳ ವಿದ್ಯೆಯ
ನೆಲೆ ಸಕಲಭೂತಂಗಳಿಗೆ ನಿ
ಶ್ಚಲನಿಯಾಮಕನೆನಿಪ ಪರಮೇಶ್ವರನು ನಾನೆಂದ ||

ನಿತ್ಯನಜನು ಸಮಸ್ತಭೂತಕೆ
ಕರ್ತನಹ ಈಶ್ವರನು ತಾನೆನಿ
ಸುತ್ತ ಶ್ರುತಿಗಳೊಳಿರ್ದ್ದೊಡೆಯು ಕೇಳೆನ್ನ ಪ್ರಕೃತಿಯನು |
ಸತ್ವದಿಂದಾಶ್ರಯಿಸುತೆನ್ನಯ
ವಿಸ್ತರದ ಗುಣಮಾಯೆಯಿಂ ಜನಿ
ಸುತ್ತಿಹೆನು ಕರ್ಮದಲಿ ಜನಿಸೆನು ಪಾರ್ಥ ಕೇಳೆಂದ ||

ಧರ್ಮಕಾವಾಗಹುದು ಹಾನಿಯ
ಧರ್ಮವಾವಾಗುದುಭವಿಸುವುದು
ಕರ್ಮಕಾಲಂಗಳನರಿದು ಬಳಿಕಾಗ ತನ್ನುವನು |
ನಿರ್ಮಿಸುವೆನವತಾರರೂಪಿಂ
ಧರ್ಮಕೋಸುಗ ಪಾರ್ಥ ತಿಳಿಸೈ
ನಿರ್ಮಲನು ನಾಂ ಜೀವರಂದದಿ ಜನಿಸೆ ಕೇಳೆಂದ ||

ಸಜ್ಜನರುಗಳ ಸಲಹಲೋಸುಗ
ದುರ್ಜನರ ನೆರೆ ಮಡುಹಲೋಸುಗ
ಮೂರ್ಜಿತದ ಧರ್ಮಂಗಳನು ನೆಲೆಗೊಳಿಸಲೋಸುಗವು |
ಕಜ್ಜವೆನಗಿದು ಪ್ರತಿಯುಗಂಗಳ
ಪಜ್ಜೆವಿಡಿದುದಯಿಸುವೆ ಫಲವನು
ವರ್ಜಿಸುತ ಕರ್ಮವನು ಮಾಡುವೆನೆಂದನಸುರಾರಿ ||

ಈಪರಿಯುಲವತರಿಸಿ ದೆನ್ನಸ್ವ
ರೂಪವನು ವರಜನ್ಮಕರ್ಮದ
ರೂಪುಗಳ ಲೇಸಾಗಿ ತಿಳಿದವನೀತನುವ ಬಿಟ್ಟು |
ಪಾಪದಿಂ ತಾ ಮರಳಿ ಜನಿಸದೆ
ತಾಪಮೂರನು ಗೆಲಿದು ಮಿಗೆ ನಿ
ರ್ಲೇಪನೆನಿಸುವ ನೆನ್ನನೈದುವನೆಂದನಸುರಾರಿ ||

ಭೀತಿರಾಗದ್ವೇಷವಿಲ್ಲದೆ
ನೀತಿಯಿಂ ನಿಜಭಕ್ತನಾಗಿರು
ತೋತು ನಾನೇ ತಮ್ಮ ನಿಜರೂಪೆಂದು ಭಾವಿಸುವ |
ಆತುಮಜ್ಞಾನದ ತಪಸ್ಸಿಂ
ಪೂತವಾಗಿಹ ಸಕಲಸುಜನ
ವ್ರಾತವೈದುವುದೆನ್ನೊಳೈಕ್ಯವನೆಂದನಸುರಾರಿ ||

ಭರದಲಾರಾರಾವ ಪರಿಯುಲಿ
ನಿರುತದಿಂ ಭಜಿಸುವರವರನಾ
ಪರಿಯಭೀಷ್ಟವನಿತ್ತು ಸುಖದಿಂ ತುಷ್ಟಿಬಡಿಸುವೆನು |
ನರನೆ ಕೇಳೈ ಮನುಜರುಗಳಾ
ದರದ ಲೆನ್ನಯಪದವನೆಲ್ಲರು
ಸ್ಥಿರಿದು ಬಳಿವಿಡಿದಿಹರು ತಿಳಿಯೆಂದನು ಮುರಧ್ವಂಸಿ ||

ಕರ್ಮದಿಂದೈಹಿಕದಫಲವ ನ
ಹಮ್ಮಮತೆಯಿಂ ಬಯಸುವರುಗಳು
ಕರ್ಮದೇವತೆಗಳನು ಹಿಡಿದರ್ಚಿಸುವರತಿಮುದದಿ |
ಧರ್ಮದಿಂದಹ ಫಲವದಾಶ್ರಯು
ಧರ್ಮವಿಡಿದಿಹ ಮನುಜರಿಗೆ ಸ
ತ್ಕರ್ಮದಿಂದೀಭುವನದೊಳು ಸಿದ್ಧಿಪುದು ಬೇಗದಲಿ ||

ನಾಲ್ಕುವರ್ಣದ ಕರ್ಮಗುಣದ ವಿ
ವೇಕದಿಂದ ವಿಭಾಗಸಹಿತೀ
ಲೋಕಗಳ ನಿರ್ಮಿಸಿದೆನೀಲೋಕಂಗಳಿಗೆ ನಾನು |
ಏಕಕರ್ತೃವೆನಿಸಿದರೆಯು ನಾ
ನೀಕೆಲಸದಲಕರ್ತೃವಾದ ನ
ಶೋಕನೆಂದೇ ತಿಳಿ ನಿಧಾನದೊಳೆಂದನೆಸುರಾರಿ ||

ಎನ್ನ ನೀಕರ್ಮಂಗಳೆಂದುಂ
ಬೆನ್ನಹತ್ತವು ಎನಗೆ ಕರ್ಮದ
ಸನ್ನಿಹಿತ ಫಲದಲ್ಲಿ ಭೋಗದ ಬಯಕೆ ಯಿಲ್ಲಾಗಿ |
ಎನ್ನನೀಪರಿ ಯಾವನೊಬ್ಬನು
ತನ್ನಮತಿಯಿಂ ಬಲ್ಲನವ ನೆರೆ
ಧನ್ಯನೀಕರ್ಮಂಗಳಿಂ ಬಿಗಿವಡೆಯಕೇಳೆಂದ ||

ಇನ್ನು ಕೇಳ್ಪೈ ಪಾರ್ಥ ಮುನ್ನಿನ ಸ
ಧನ್ಯರಾದ ಮುಮುಕ್ಷುಗಳು ನೆರೆ
ಸನ್ಮಹಿತರುಗಳಾಗಿ ಕರ್ಮವ ತಿಳಿದು ಮಾಡಿದರು |
ಮುನ್ನಿನವರುಗಳಿಂದಲಿನ್ನುಂ
ಮುನ್ನಿನವರುಂ ಬಿಡದೆ ಮಾಡಿರು
ಪುನ್ನತದ ಸತ್ಕರ್ಮವನು ನೀನೊಲಿದು ಮಾಡೆಂದ ||

## ಚತುರ್ಥಾಧ್ಯಾಯಂ

ಕರ್ಮವಾವುದು ನೋಡೆ ನಿಜದಲ
ಕರ್ಮವಾವುದ ದೆಂತೆನುತ್ತ
ಕರ್ಮವನು ತಿಳಿವಲ್ಲಿ ಮೋಹಿತರಹರು ಕೋವಿದರು ||
ಕರ್ಮವಾವುದನರಿದಮಂಗಳ
ಕರ್ಮಬಂಧವ ಹರಿವೆ ಕೇಳಾ
ಕರ್ಮವನು ಹೇಳುವೆನು ನಿನಗಾನೆಂದನಸುರಾರಿ ||

ನಿರುತ ಕರ್ಮದ ರೂಪವನು ದು
ಶ್ಚರಿತವಾದ ವಿಕರ್ಮರೂಪನು
ಪರಿವಿಡಿಯಲಿ ಯಕರ್ಮವಿನಿತರ ರೂಪಭೇದವನು |
ಪರಿಕಿಸಲು ನೀನರಿಯಬೇಹುದು
ಭರದಿಕರ್ಮದ ಗತಿ ವಿಚಾರಿಸೆ
ಲರಿದೆನಿಸುತಿಹುದಾಗಿ ನಿನಗದ ನೊರೆವೆ ಕೇಳೆಂದ ||

ನಿರುಪಮಾತುಮನಲ್ಲಿ ಕರ್ಮವ
ಪರಿಕಿಸದೆ ದೇಹೆಂದ್ರಿಯಂಗಳ
ಉರುತರದ ಕರ್ಮವನು ಕಂಡವನಾವನೊಬ್ಬವನು |
ನರರೊಳಧಿಕಜ್ಞಾನಿ ಯಾತನೆ
ಪರಮಯೋಗೀಶ್ವರನು ಕರ್ಮವ
ಭರದಲೆಲ್ಲವ ಮಾಡಿದಾತನು ಪಾರ್ಥಕೇಳೆಂದ ||

ಆವನೊಬ್ಬನು ಸಕಲಕರ್ಮವ
ನಾವಫಲ ದಾಸಕ್ತಿಯಿಲ್ಲದೆ
ಭಾವದಲಿ ನಡೆಸುತ್ತ ವಿಜ್ಞಾನಾಗ್ನಿ ಭರ್ಜಿತದ |
ಜೀವಸಂಚಿತಕರ್ಮದಿಂ ದಿಹ
ನಾವಿವೇಕಿಯ ಬುಧರುಗಳು ನೆರೆ
ಭಾವಿಸುವರೈ ಪಂಡಿತೋತ್ತಮನೆಂದು ಲೋಕದಲಿ ||

ನಿತ್ಯತೃಪ್ತನು ಸಕಲಬಯಕೆಯ
ಚಿತ್ತದಲಿ ಬಿಟ್ಟಿಹ ನಿರಾಶ್ರಯ
ಚಿತ್ತನಾಗಿಹ ಜ್ಞಾನಿ ಸತ್ಕರ್ಮಂಗಳಲಿ ತಾನು |
ಎತ್ತಲಾ ನುದ್ಯೋಗಿಸಿದೊಡಂ
ಹತ್ತವಾಕರ್ಮದ ಫಲಂಗಳು
ಕರ್ತೃತಾನಲ್ಲೆನಿತು ಕರ್ಮವ ಮಾಡಲವನೆಂದ ||

ಆಸೆಯನು ನೆರೆಬಿಟ್ಟು ನಿಯತದಿ
ಸೂಸ ದಂತಃಕರಣಯೋಗಾ
ಭ್ಯಾಸಿಯಾಗಿಯೆ ಸಕಲವಿಷಯವ ಬಿಟ್ಟು ಮಾನವನು |
ಈಶರೀರಕೆ ತಕ್ಕಕರ್ಮವ
ನೇಸು ಮಾಡಿದೊಡಂ ವಿಷಮವಹ
ದೋಷಲೇಪವ ಪಡೆಯ ನವನೆಲೆ ಪಾರ್ಥ ಕೇಳೆಂದ ||

ಆದನಿತು ಲಾಭದಲಿ ತುಷ್ಟಿಯ
ನೈದಿ ಸಂತೋಷದಲಿ ದ್ವಂದ್ವವ
ನೈದೆ ಸೈರಿಸಿ ಮತ್ಸರವ ನೆರೆಬಿಟ್ಟು ಚಿತ್ತದಲಿ |
ಆದ ಲಾಭಾಲಾಭದಲಿ ಮಿಗೆ
ಭೇದಹರ್ಷಂಗಳನು ತಾಳದೆ
ವೈದಿಕಕ್ರಿಯೆಮಾಡಿದರೆಯುಂಬದ್ಧನಲ್ಲೆಂದ ||

ಸಂಗವನು ನೆರೆಬಿಟ್ಟುರಾಗದ
ಲಿಂಗವಿಲ್ಲದೆ ಜ್ಞಾನದಲಿ ದೃಢ
ಸಂಗಿಯಾಗಿ ಸುಚಿತ್ತನಾಗಿ ಮಹೇಶ್ವರಾರ್ಪಣಕೆ |
ಹಿಂಗದನುದಿನ ಕರ್ಮವನು ಮಾ
ಳ್ಪಂಗೆ ಸಂಚಿತಸರ್ವಕರ್ಮವು
ಹಿಂಗಿಹೋಹುದು ಪಾರ್ಥ ನೀ ಕೇಳೆಂದನಸುರಾರಿ ||

ಬ್ರಹ್ಮರೂಪೆನಿಪಗ್ನಿಯಲಿ ತ
ದ್ಬ್ರಹ್ಮರೂಪಹ ಹವಿಯು ಹೋಮವು
ಬ್ರಹ್ಮರೂಪಹ ಕರ್ತೃವೀಬ್ರಹ್ಮಾರ್ಪಣವ ಕುರಿತು |
ಬ್ರಹ್ಮಕರ್ಮಸಮಾಧಿಯಿಂದಾ
ಬ್ರಹ್ಮವನು ತಾನೈದುವನು ತ
ದ್ಬ್ರಹ್ಮವಿಂತೀಜಗವು ಯೋಗಿಗೆ ಪಾರ್ಥಕೇಳೆಂದ ||

ಮತ್ತೆಕೆಲಬರು ಯೋಗಿಗಳು ಯಜಿ
ಸುತ್ತಿಹರು ಘನಸುಗುಣದಿಂದೇ
ವೋತ್ತಮಾರ್ಪಣವೆನಿಪ ಯಜ್ಞವ ವೈದಿಕಾಗ್ನಿಯಲಿ |
ಇತ್ತ ನಿರ್ಗುಣಯೋಗಿಗಳು ಯಜಿ
ಸುತ್ತಿಹರು ಬ್ರಹ್ಮಾಗ್ನಿಯಲಿ ಪುರು
ಷೋತ್ತಮನನು ವಿವೇಕಯಜ್ಞದಿ ಪಾರ್ಥ ಕೇಳೆಂದ ||

ಕೆಲರು ಧ್ಯಾನಸಮಾಧಿಯೆಂಬೀ
ಜ್ವಲನನಲಿ ಶ್ರೋತ್ರಾದಿಗಳಿಗಹ
ಫಲವ ಬೇಳುತ್ತಿರ್ಪರೈ ಕೆಲರಿಂದ್ರಿಯಾಗ್ನಿಯಲಿ |
ಸುಳಿಯುತಿಹ ಶಬ್ದಾದಿ ವಿಷಯಂ
ಗಳನು ಬೇಳುತ್ತಿಹರು ಪರಿಪರಿ
ಗಳ ವಿಧಾನಂಗಳನು ಹೇಳುವೆನೆಂದನಸುರಾರಿ ||

ಜ್ಞಾನದಿಂ ದೀಪಿಸುತ ವಿಷಯು
ಧ್ಯಾನವಿಲ್ಲದೆ ಚಿತ್ತನಿಯಮವಿ
ಧಾನ ಯೋಗಾಗ್ನಿಯಲಿ ಕೆಲ ರಭ್ಯಾಸಯೋಗದಲಿ |
ಈನಿಖಿಲಕರಣೇಂದ್ರಿಯಂಗಳ
ಧೀನಕರ್ಮವ ಪ್ರಾಣಕರ್ಮವ
ಮೌನದಿಂ ದೆಲ್ಲವನು ಬೇಳುವರೆಂದನಸುರಾರಿ ||

ಶ್ರುತಿಗಳಂ ಪೊಗಳಿಸಿಕೊಳುತ್ತಿಹ
ವ್ರತವನುಳ್ಳಯತೀಶ್ವರರು ತ
ತ್ಸ್ಮೃತಿವಿಹಿತಸದ್ದ್ರವ್ಯವೇದಾಧ್ಯಯನಯೋಗತಪ |
ಸ್ಸತತ ತತ್ವಜ್ಞಾನರೂಪಿನ
ಕ್ರತುಗಳನು ಮಾಡುತ್ತಿಹರು ಸುಖ
ದತಿಶಯದ ಮೋಕ್ಷವನು ಬಯಸುತ ಪಾರ್ಥಕೇಳೆಂದ ||

ಕೆಲರು ಪ್ರಾಣಾಯಾಮದಲಿ ನಿ
ಶ್ಚಲರೆನಿಸಿಕೊಂಬವರು ಪ್ರಾಣಾ
ನಿಲನಪಾನಾನಿಲನ ರೇಚಕಪೂರಕಂಗಳನು |
ಕಳೆದು ಕುಂಭಕದಿಂದ ಪ್ರಾಣನ
ಬಲಿದಪಾನಸಮೀರನಲಿ ತಾ
ನೊಲಿದು ಬೇಳ್ಪರಪಾನನನು ಬೇಳುವರು ಪ್ರಾಣನಲಿ ||

ಮತ್ತೆ ನಿಯತಾಹಾರರಾದನಿ
ವೃತ್ತವಿಷಯರು ನಾಗಮುಖ್ಯಮ
ರುತ್ತಗಳ ಬೇಳುವರು ಮುಖ್ಯಪ್ರಾಣನಿಚಯದಲಿ |
ಉತ್ತಮದ ಯಜ್ಞವನು ಬಲ್ಲವ
ರುತ್ತಮರೆನಿಪ್ಪೆಲ್ಲರುಂ ವಿ
ಧ್ಯುಕ್ತವಹ ಯಜ್ಞಂಗಳಿಂ ಪಾಪವನು ಕಳೆಯುವರು ||

ಕುರುಕುಲೋತ್ತಮ ಯಜ್ಞಶೇಷವ
ಹಿರಿದು ಭುಂಜಿಸಿದವರುಗಳು ನೆರೆ
ಪರಮಪದವನು ಪಡೆವ ಯಜ್ಞದ ಫಲವದಿಲ್ಲದಿಹ |
ನರರುಗಳಿಗಿಹ ಲೋಕವೇ ತಾ
ದೊರೆಕದೆನೆ ಪರಲೋಕವೆಲ್ಲಿಯ
ದುರುಪರಾಕ್ರಮಿ ಪಾರ್ಥ ಕೇಳೆಂದನು ಮುರಧ್ವಂಸಿ ||

ಈಪರಿಯ ಬಹುವಿಧದ ಯಜ್ಞಗ
ಳಾಪರಬ್ರಹ್ಮದಲಿ ಜನಿಸಿ ನಿ
ರೂಪಿಸುವ ವೇದದಮುಖದವಾಕ್ಯದಲ್ಲಿ ಪೇಳಿಹುವು |
ಆಪರಿಯ ಕರ್ಮೇಂದ್ರಿಯಾದಿಕ
ಲಾಪದಿಂ ಜನಿಸಿದುವನೆಲ್ಲವ
ನೀಪರಿಯಲರಿಯಲ್ಕೆ ನೀನೆ ಮುಕ್ತನಹೆ ಯೆಂಧ ||

ಎಲೆಪರಂತಪ ಜ್ಞಾನಯಜ್ಞವು
ಹಲವುದ್ರವ್ಯದ ಯಜ್ಞದಿಂದತಿ
ಸುಲಭ ವುತ್ತಮಲೇಸು ಕೇಳಿನ್ನಖಿಲಶಾಸ್ತ್ರದೊಳು |
ಹಲವು ಸತ್ಕರ್ಮಂಗಳಿವು ತಾ
ವೆಲೆಗೆ ತತ್ವಜ್ಞಾನದಿಂದಲೆ
ಸಲೆ ಸಮಾಪ್ತಿಯನೈದುವುವು ಕಲಿಪಾರ್ಥ ಕೇಳೆಂದ ||

ಪರಮತತ್ವಜ್ಞಾನವನು ನೀ
ನರಿತು ಕಲಿವೊಡೆ ಜ್ಞಾನಿಗಳ ನತಿ
ಪರಿಚರಿಯವನು ಮಾಡಿ ವಂದಿಸುತವರ ಬೆಸಗೊಳಲು |
ಹಿರಿದು ತುಷ್ಟಿಯನೈದಿ ಕೃಪೆಯಿಂ
ಕರುಣಿಸುವರದರಿಂದ ನಿನಗಾ
ಪರಮತತ್ವಜ್ಞಾನ ವಹುದೆಂದನು ಮುರಧ್ವಂಸಿ ||

ಆವುದೊಂದೀತತ್ವವನು ನಿಜ
ಭಾವದಿಂ ನೆರೆತಿಳಿದೆ ಯಾದರೆ
ಜೀವಭಾವದ ಲಜ್ಞತನವನು ಮರಳಿ ನೀನೈದೆ |
ಆವಿವೇಕದ ಬಲುಹಿನಿಂ ಭೂ
ತಾವಳಿಯ ನಿನ್ನಲ್ಲಿ ಕಂಡೊಡೆ
ಜೀವರುಗಳೆಲ್ಲರನು ಎನ್ನಲಿ ಕಾಂಬೆ ನೀನೆಂದ ||

ಬಳಿಕ ನೀನು ಸಮಸ್ತಪಾಪಿಗ
ಳೊಳಗಮತಿಕಡುಪಾಪಿ ಯಾಗಿರೆ
ತಿಳಿಯೆ ಕೇಳೈ ಪಾರ್ಥ ನೀನಾಸಕಲಪಾತಕದ |
ಜಲನಿಧಿಯ ನತ್ಯಂತನಿಜನಿ
ರ್ಮಲದ ತತ್ವಜ್ಞಾನವೆನಿಸುವ
ತೊಳತೊಳಗುತಿಹ ತೆಪ್ಪದಿಂ ದಾಂಟುವೆ ಸುನಿಶ್ಚಯವು ||

ಅತಿಭಡಾಳಿಸಿದಗ್ನಿ ಶುಷ್ಕ
ಪ್ರತತಿಗಳ ಭಸ್ಮವನು ಮಾಡುವ
ಗತಿಯವೊಲು ಜ್ಞಾನಾಗ್ನಿ ಸಂಚಿತಕರ್ಮವೆಲ್ಲವನು |
ಹತವಮಾಡುವುದೈ ಧನಂಜಯ
ಕ್ಷಿತಿಯೊಳಗೆ ನೀನದನರಿದು ನಿಜ
ಗತಿಯನೊಲಿವರೆ ಪರಮತತ್ವಜ್ಞಾನಿ ಯಾಗೆಂದ ||

ಪರಮತತ್ವಜ್ಞಾನದೀಪ್ತಿಗೆ
ಸರಿಯೆನಿಪ ಪಾವನವು ಧರೆಯೊಳು
ಹಿರಿದು ಬೇರೊಂದಿಲ್ಲ ನೋಡಾಜ್ಞಾನಸಿದ್ಧಿಯನು |
ನಿರುತ ಯೋಗಾಭ್ಯಾಸವುಳ್ಳಾ
ಪುರುಷ ತಾನೇ ಹಲವು ಕಾಲಾಂ
ತರದಿ ತನ್ನಲಿ ಪಡೆವ ನೆಲೆಕಲಿಪಾರ್ಥ ಕೇಳೆಂದ ||

ಇಂದ್ರಿಯಂಗಳನೊಲಿಸಿ ಭಕ್ತಿಯ
ಲೊಂದಿ ತತ್ವಜ್ಞಾನನಿಷ್ಠೆಗೆ
ನಿಂದವನು ಸುಜ್ಞಾನವನು ಮುದದಿಂದಲೈದುವನು |
ಸಂದ ಜ್ಞಾನವ ಪಡೆದು ಪರಮಾ
ನಂದಮಯವಹ ಮೋಕ್ಷವನು ಸಾ
ನಂದದಿಂದೈದುವನು ಬೇಗದೊಳೆಂದನಸುರಾರಿ ||

# ಚತುರ್ಥಾಧ್ಯಾಯಂ.

ತಡೆಯದರ್ಜುನು ಭಕ್ತಿಯಿಲ್ಲದೆ
ಜಡನು ಸಂದೇಹವನು ಮನದಲಿ
ಬಿಡದೆ ಮಾಡುವ ಮೂರ್ಢನುಂ ಕೆಡುವರು ನಿಧಾನಿಸಲು
ಬಿಡದೆ ಸಂದೇಹವನು ಮಾಳ್ಪಗೆ
ಪೊಡವಿಯಲಿ ಸುಖವಿಲ್ಲ ಪರದಲಿ
ಪಡೆವ ಸದ್ಗತಿದೊರಕದೈ ಕಲಿಪಾರ್ಥ ಕೇಳೆಂದ ||

ಎಲೆ ಧನಂಜಯ ಧ್ಯಾನಯೋಗದ
ಬಲದಿ ಕರ್ಮವ ಬಿಟ್ಟು ಜ್ಞಾನದ
ಬಲುಹಿನಿಂ ದೀಸಕಲಸಂದೇಹಂಗಳಳಿದುಳಿದ |
ನೆಲೆಗೆ ತತ್ವಜ್ಞಾನದಲಿ ಸಂ
ಚಲನವಿಲ್ಲದ ಆತ್ಮನಿಷ್ಠನ
ಹಲವು ಕರ್ಮಂಗಳು ನಿಜದಿ ಬಂಧಿಸವು ಕೇಳೆಂದ ||

ಅದುನಿಮಿತ್ತದಿ ಪಾರ್ಥ ನಿನ್ನಯ
ಹೃದಯದವಿವೇಕದಲಿ ಜನಿಸಿದ
ಹುದಿದ ಸಂದೇಹವನು ಜ್ಞಾನದೊಳಾದ ಖಂಡೆಯದಿ ||
ಮುದದಿ ಖಂಡಿಸಿ ಕರ್ಮಯೋಗವ
ಹದುಳದಿಂ ಮಾಡೇಳುನೀನೆಂ
ದಿದಿರಲಿಹ ಪಾರ್ಥನನು ನುಡಿದನು ದಾನವಧ್ವಂಸಿ ||

ಇಂತು ಜ್ಞಾನಯೋಗವೆಂಬ ಚತುರ್ಥಾಧ್ಯಾಯಂ ಸಂಪೂರ್ಣಂ

# ಪಂಚಮಾಧ್ಯಾಯಂ

ಸೂಚನೆ || ಕರ್ಮಲೇಸೋ ದೇವ ನೆರೆ ನಿ
ಷ್ಕರ್ಮ ಲೇಸೋ ಹೇಳೆನಲು ಸ
ಸತ್ಕರ್ಮವೇ ಸಾಧಕರಿಗುತ್ತಮವೆಂದನಸುರಾರಿ ||

ಕರ್ಮಸನ್ಯಾಸವನು ಹೊಗಳುತ
ಕರ್ಮಯೋಗವ ಮರಳಿ ಹೊಗಳುವೆ
ಧರ್ಮವೀಯೆರಡರೊಳಗುತ್ತಮ ವಾವುದೊಂದದನು |
ನಿರ್ಮಲದಿ ನಿರ್ಧರಿಸಿ ಶಾಸ್ತ್ರದ
ಮರ್ಮವನು ಹೇಳೆನಗೆನುತಲಾ
ಧರ್ಮನಂದನನನುಜ ಬೆಸಗೊಂಡನು ಮುರಾಂತಕನ ||

ಹರಿ ಕರುಣಿಸಿದಖಿಲಕರ್ಮವ
ಭರದಿ ಬಿಡುವುದು ಫಲವ ಬಿಟ್ಟು |
ದರದಿ ಮಾಡುವುದುಭಯಮತ ಕೈವಲ್ಯಕರವಹುದು ||
ಎರಡರೊಳು ಕರ್ಮವನು ಬಿಟ್ಟು |
ಚರಿಸುವುದರಿಂ ಕರ್ಮಯೋಗವು |
ಪರಿಪಿಡಿಯ ಉತ್ತಮವೆನಿಸುವುದು ಪಾರ್ಥ ಕೇಳೆಂದ

ಎಲೆಧನಂಜಯ ಆವನೊಬ್ಬನು |
ಹಲವು ಲಾಭಾಲಾಭವನು ತಾ |
ಸೊಲಿಯದೇ ದ್ವೇಷಿಸದೆ ಇಹನವ ನಿತ್ಯಸನ್ಯಾಸಿ ||
ಸಲೆ ಸಕಲದ್ವಂದ್ವಂಗಳನು ನೆರೆ
ಗೆಲಿದವನು ಈ ಉಭಯಬಂಧದಿ
ತೊಲಗಿ ಸುಖದಿಂ ನಿಜಪದವನೈದುವನು ಕೇಳೆಂದ ||

## ಪಂಚಮಾಧ್ಯಾಯಂ

ಪರಮಸಾಂಖ್ಯವು ಕರ್ಮಯೋಗ ವಿ
ವೆರಡರಲಿ ಭೇದವನು ಕಾಂಬರು
ಮರುಳರಲ್ಲದೆ ಲೋಕದಲಿ ಪಂಡಿತರೆನಿಸುವವರು |
ಹಿರಿದು ಭೇದವ ನುಡಿಯರಿದರೊಳು
ಭರದಲೊಂದನು ಸಾರಿದವರೀ
ಯೆರಡರಿಂದಹ ಫಲವ ಪಡೆವರು ಪಾರ್ಥ ಕೇಳೆಂದ ||

ಪರಮತತ್ವಜ್ಞಾನಮಾರ್ಗದಿ
ಹಿರಿಯರಾವುದಪಡೆದರದನೇ
ವರತಪೋನುಷ್ಠಾನದಿಂದೈದುವವರು ಯೋಗಿಗಳು |
ಹಿರಿದು ಸಾಂಖ್ಯವು ಕರ್ಮಯೋಗವು
ನಿರುತವೊಂದೆಂದಾವನೊಬ್ಬನು
ಭರದಿಕಂಡವನಾತನೇ ಕಂಡವನು ತತ್ವವನು ||

ಯಮ ನಿಯಮ ಯೋಗಂಗಳಿಲ್ಲದೆ
ಸಮನಿಸದು ಸನ್ಯಾಸಮಪ್ಪೊಡೆ
ಯಮ ನಿಯಮ ಯೋಗಂಗಳಭ್ಯಾಸವನು ಮುದದಿಂದ |
ಕ್ರಮವಿಡಿದು ಮಾಡುವ ಮುನಿಪ ಕೇ
ಳಮಲಬ್ರಹ್ಮವ ಬೇಗದಿಂ ತನು .
ಭ್ರಮೆಯುಳಿದು ಸುಖದಿಂದಲೈದುವ ಪಾರ್ಥ ಕೇಳೆಂದ ||

ಇಂದ್ರಿಯಂಗಳ ಗೆಲಿದು ಮನವನು
ಬಂಧಿಸುತ ವರಯೋಗಯುತನಾ
ನಂದದಿಂದವೆ ನಿಜವನರಿದಾತುಮನು ತಾನಾಗಿ |
ನಿಂದು ಸರ್ವಾತ್ಮಕನು ತಾನಹೆ
ನೆಂದು ಕರ್ಮವ ಮಾಡಿದೊಡೆ ನಿ
ರ್ಬಂಧಿಸವು ಕರ್ಮಂಗಳವನನು ಪಾರ್ಥ ಕೇಳೆಂದ ||

ಪರಮತತ್ವಜ್ಞಾನಿಯಾಗಿಹ
ಪರಮಯೋಗೀಶ್ವರನು ಕಾಣುತ
ಸ್ವರವಕೇಳುತ ಪರಿಮಳಂಗಳ ಕೊಳ್ಳುತ ಸೋಂಕುತಲೂ
ಭರದಿ ನಡೆಯುತ ನುಡಿಯುತುರೆ ಕಾ
ಹುರದಲಿಂದ್ರಿಯತತಿ ವಿಷಯದಲಿ
ಚರಿಸುತಿಹುದೆಂದರಿದು ತಾನಪ್ರೀತನಾಗಿಹನು ||

ಆವನೊಬ್ಬನು ಬ್ರಹ್ಮದಲಿ ತಾ
ಭಾವದಿಂ ನೆಲೆಗೊಂಡು ಫಲವನು
ಭಾವಿಸದೆ ಕರ್ಮಂಗಳನು ಮಾಡುತ್ತಲಿಹನವನು |
ತಾವರೆಯು ಎಲೆ ನೀರಿನಿಂ ನೆರೆ
ತೀವಿ ಲೇಪವ ಪಡೆಯದಂದದ
ಲಾವ ಕರ್ಮದಿ ಲೇಪವಡೆಯದೆ ಮುಕ್ತನಾಗಿಹನು ||

ಕಾಯದಿಂ ಮನದಿಂದ ಬುದ್ಧಿಯು
ಪಾಯದಿಂ ಬರಿಯಿಂದ್ರಿಯಂಗಳ
ಸಾಯಸಂಗಳಲಾದರೆಯು ಫಲದಾಸೆಯನು ಬಿಟ್ಟು |
ನ್ಯಾಯ ಕರ್ಮವಮಾಡುವರು ನಿ
ರ್ದಾಯದಲಿ ಯೋಗಿಗಳು ನಿರ್ಮಲ
ಕಾಯದಂತಃಕರಣಶುದ್ಧಿಗೆ ಪಾರ್ಥ ಕೇಳೆಂದ ||

ಕರ್ಮಫಲವನು ಬಿಟ್ಟು ಮಾಡುವ
ಕರ್ಮವನು ವರಯೋಗಸಿದ್ಧನು
ನಿರ್ಮಲದ ಶಾಂತಿಯನು ಪಡೆವನು ಫಲವ ತಾ ಬಯಸಿ |
ಕರ್ಮವನು ಮಾಡುವನು ಕಾಮದ
ಕರ್ಮದಿಂ ಸಂಸಾರವನು ತಹ
ಕರ್ಮಬಂಧನದಲ್ಲಿ ಕಡೆವನು ಯೋಗವಿರಹಿತನು ||

ಇಂದ್ರಿಯದ ಜಯವುಳ್ಳವನು ಮನ
ದಿಂದ ಕರ್ಮವ ಬಿಟ್ಟು ತಾನೇ
ಕುಂದದೀ ಯೊಂಬತ್ತು ಬಾಗಿಲ ಪುರದ ದೇಹದಲಿ |
ನಿಂದು ಸುಖದಿಂದಿರ್ಪ ಜೀವನ
ದೊಂದುಕರ್ಮವ ಮಾಡ ಪರರಿಂ
ದೊಂದುಕರ್ಮವ ಮಾಡಿಸನು ಕಲಿಪಾರ್ಥ ಕೇಳೆಂದ ||

ಜನಕೆ ಕರ್ತೃತ್ವವನು ಕರ್ಮವ
ನನಿತು ಕರ್ಮದ ಫಲದ ಯೋಗವ
ನಸಿತುವನು ತಾ ಮಾಡನೀಶ್ವರನಾವಪರಿಯಿಂದ |
ದಿನದಿನದ ಲನುವರ್ತಿಸುವುದೆಂ
ತೆಸಲನಾದಿ ಯವಿದ್ಯೆಯಿಂ ತಾ
ಘನವೆನಿಪ ಸಂಸ್ಕಾರದಿಂದವೆ ನಡೆಯುತಿಹುದೆಂದ ||

ಧರಿಸನೀಶ್ವರನಾರಪಾಪವ
ನುರುತರದ ಸುಕೃತವನು ಕೊಳ್ಳನು
ಪರಮತತ್ವಜ್ಞಾನವಜ್ಞಾನದಲಿ ಮುಸುಕಿಹುದು ||
ನಿರುತವದರಿಂ ಪ್ರಾಣಿಗಳು ಭವ
ಗರ ಹೊಡೆದು ಸಂಸಾರಚಕ್ರದ
ಪರುಠವಣೆಯಲಿ ಭ್ರಮಿಸುವರು ಕೇಳೆಂದನಸುರಾರಿ ||

ಆರು ಕೆಲರಜ್ಞತ್ವಜ್ಞಾನದ
ಸಾರದಿಂ ನೆರೆ ಕೆಡಲವರು ನಿ
ರ್ಧಾರ ತತ್ವಜ್ಞಾನ ತಾ ಪರಮಾತ್ಮರೂಪವನು |
ಸೂರಿಯನವೊಲು ಬೆಳಗಿ ತೋರಲು
ದಾರರುಗಳೇ ಜಗದೊಳೇನುವ
ಪಾರರೈ ಕೇಳೆಂದನಾ ಪಾರ್ಥಂಗೆ ಮುರವೈರಿ ||

ಆಪರ ಬ್ರಹ್ಮದಲಿ ಬುದ್ಧಿಯು
ದೀಪಿಸುತಲಿರ್ಪವರು ಮುದದಿಂ
ದಾಪರವೆ ತಾವೆಂಬ ನಿಷ್ಠೆಯನುಳ್ಳವಾನವರು |
ಆಪರಿಯ ಸುಜ್ಞಾನದಿಂ ಘನ
ತಾಪವನು ಪರಿಹರಿಸಿ ಪುನರಪಿ
ರೂಪನೈದದೆ ನಿಜವ ತಾವೈದುವರು ಕೇಳೆಂದ ||

ವಿದ್ಯವಿನಯಗಳಿಂದಧಿಕನಾ
ಗಿದ್ದ ದ್ವಿಜನಲಿ ಗೋವಿನಲಿ ನೆರೆ
ಕದ್ದ ಕಳ್ಳನಲಾನೆಯಲಿ ಶುನಕನಲಿ ಶ್ವಪಚನಲಿ |
ಇದ್ದ ಪರಮಾತುಮನ ನೇಕೋ
ಬುದ್ಧಿಯಲಿ ಸಮನಾಗಿ ಕಾಂಬರು
ಬುದ್ಧಿನೆಲೆಗೊಂಡಿಹ ಪರಮತತ್ವಜ್ಞ ಪಂಡಿತರು ||

ಆರುಕೆಲಬರು ಮನದಲೀಪರಿ
ಸೇರುವೆಯು ಸಾಮ್ಯದಲಿಹರು ನಿ
ರ್ಧಾರದಿಂ ದೇಹದಲಿ ಗೆಲಿದಿಹರವರು ಭವಭಯವ |
ವೀರಕೇಳ್ಳೆ ಗೆಲುವ ಪರಿಯನು
ಪಾರಮಾರ್ಥದಿ ದೋಷ ಹೊದ್ದದ
ಸಾರತರ ಬ್ರಹ್ಮದಲಿ ನೆಲೆಯಾಗಿರುವ ಕತದಿಂದ ||

ಈಪರಿಯ ಬ್ರಹ್ಮದಲಿ ಬುದ್ಧಿಯು
ರೂಪುನೆಲೆಗೊಂಡಜ್ಞನಾಗದೆ
ಯಾಪರಬ್ರಹ್ಮವನರಿದು ಬ್ರಹ್ಮದಲಿ ನೆಲಸಿದವ |
ರೂಪು ಮೊದಲಹ ವಿಷಯಲಾಭದೆ ತಾ
ಪರಮಹರುಷವನು ಪಡೆಯನು
ಶಾಪ ಮೂರೊದಗಿದರೆ ಬೆದರನು ಪಾರ್ಥ ಕೇಳೆಂದ ||

ಪಂಚಮೋಧ್ಯಾಯಂ.

ಆವವನು ವಿಷಯಂಗಳಲಿ ಸ
ದ್ಭಾವದಿಂದೆರಗದ ಸುಚಿತ್ತದ
ಪಾವನನು ತನ್ನಲ್ಲಿ ಸುಖವಾವುದನು ಪಡೆದಿಹನು |
ಆವಿಮಲಬ್ರಹ್ಮದಲಿ ಧ್ಯಾನದೆ
ತೀವಿ ಬೆರಸಿದ ಬುದ್ಧಿಯುಳ್ಳವ
ಭಾವಿಸಲು ಕೇಳಾತನಚ್ಯುತ ಪದವನೈದುವನು ||

ತನುವಿಗಿಂದ್ರಿಯ ವಿಷಯಸಂಗದಿ
ಜನಿತ ಭೋಗಸಮೂಹ ದುಃಖದ
ಘನತೆಗಿದು ಕಾರಣ ಮೊದಲು ಕಡೆ ಯುಂಟೆನಿಪುದಾಗಿ |
ಅನಿತು ಭೋಗಂಗಳಲಿ ತಾನನು
ಮನದೊಳಾವರಯೋಗಿ ರಮಿಸನು
ಚಿನುಮಯಾತುಮನಾಗಿಹನು ಕೌಂತೇಯ ಕೇಳೆಂದ ||

ಆವನೊಬ್ಬ ಶರೀರದಿಂದೀ
ಜೀವ ತೊಲಗದ ಮುನ್ನವೀತನು
ಭಾವದಲಿ ಜನಿಸಿರ್ದ ಕಾಮಕ್ರೋಧದುರಣೆಯನು |
ಠಾವ ಸೈರಿಸುವೊಡೆ ಸಮರ್ಥನ
ದಾವನಾತನೆ ಯೋಗಯುಕ್ತನು
ಪಾವನನು ಸುಖಿಯಾಗಿಹನು ಕಲಿಪಾರ್ಥ ಕೇಳೆಂದ ||

ಪ್ರತ್ಯಗಾತ್ಮನ ಲಾವನೊಬ್ಬನು
ನಿತ್ಯ ರಮಿಸುತ ಸುಖದಲಿಹನ
ತ್ಯುತ್ತಮದ ತತ್ಪದದಲಂತರ್ಜ್ಯೋತಿ ಯಳ್ಳವನು |
ಯುಕ್ತನಾತನೆ ಯೋಗಿ ತಾಪರ
ತತ್ವವಾದವ ನಮಳಸದ್ವಯ
ನುತ್ತಮನು ಸಾಯುಜ್ಯಮುಕ್ತಿಯ ಪಡೆವ ಕೇಳೆಂದ ||

ಭೇದಬುದ್ಧಿಯ ಹರಿದವರು ಕ್ಷಯ
ವಾದ ಪಾಪವನುಳ್ಳವರು ವಶ
ವಾದ ಚಿತ್ತವನುಳ್ಳವರು ಸಚರಾಚರಂಗಳಲಿ ।
ಆದರಣೆಯಿಂ ನಿಜವ ಮಾಳ್ಪನಿ
ಜೋದಯದಲಿಹ ತತ್ವನಿಷ್ಠರು
ವೇದವೇದ್ಯರು ಬ್ರಹ್ಮಸಾಯುಜ್ಯವನು ಪಡೆಯುವರು ॥

ಕಾಮಕ್ರೋಧಾದಿಗಳಳಿದ ನಿ
ಸ್ಸೀಮರಿಗೆ ಮೋಕ್ಷಪ್ರಯತ್ನವ
ನೇಮದಿಂ ಮಾಳ್ಪರಿಗೆ ಚಿತ್ತವ ವರಿಸಬಲ್ಲರಿಗೆ ।
ತಾಮಸದ ಬುದ್ಧಿಯನು ಗೆಲಿದನಿ
ರಾಮಯದ ಯತಿಗಳಿಗೆ ತೋರ್ಪುದು
ಸೀಮೆ ಯಳಿದಿಹ ಬ್ರಹ್ಮಸುಖವೀ ಸಕಲದಿಶೆಗಳಲಿ ॥

ಹೊರಗೆಸೆವ ವಿಷಯಂಗಳನು ನೆರೆ
ಜರಿದು ದೃಷ್ಟಿಯನೆರಡು ಹುಬ್ಬುಗ
ಳುರುವ ಮಧ್ಯದಲಿರಿಸಿ ನಾಸಿಕದೊಳಗೆ ಚರಿಸುತಿಹ ।
ಮೆರೆವ ಪ್ರಾಣಾಪಾನ ವೆರಡನು
ಸೆರೆವಿಡಿದು ಸರಿಮಾಡಿ ಧ್ಯಾನದ
ನಿರಿಗೆಯಿಂದಭ್ಯಾಸ ಯೋಗಿಗಳಿಹರು ಕೇಳೆಂದ ॥

ಮನವ ಬುದ್ಧಿಯನಿಂದ್ರಿಯಂಗಳ
ಘನವಿಕಾರವ ನಿಲಿಸಿ ನಿರ್ಮಲ
ಮನನಶೀಲನು ಮೋಕ್ಷದಲ್ಲಾಸಕ್ತನಾದವನು ।
ತನುವಿನಿಚ್ಛೆಯ ಕ್ರೋಧಭಯವನು
ನೆನೆಯದೆಲ್ಲವ ಬಿಟ್ಟು ನಿಂದಾ
ತನುವಿಚಾರಿಸೆ ನಿತ್ಯಜೀವನ್ಮುಕ್ತ ಕೇಳೆಂದ ॥

ಸರ್ವಲೋಕಂಗಳಿಗಧಿಪನಹ
ಸರ್ವಯಜ್ಞ ತಪಂಗಳು ನೆರೆ
ಸರ್ವಕಾಲಂಗಳಲಿ ಭೋಗಿಪ ಸರ್ವತೋಮುಖನು |
ಸರ್ವಭೂತಂಗಳಿಗೆ ಸಖನೆಂ
ದುರ್ವಿಯೊಳಗೆನ್ನನ್ನು ಭಜಿಪನು
ಸರ್ವಥಾ ಮುಕ್ತಿಯನು ಪಡೆವನು ಪಾರ್ಥ ಕೇಳೆಂದ || ೨೮

|| ಇಂತು ಕರ್ಮಸನ್ಯಾಸಯೋಗವೆಂಬ ಪಂಚಮಾಧ್ಯಾಯಂ ಸಂಪೂರ್ಣಂ ||

# ಷಷ್ಠಾಧ್ಯಾಯಂ

ಸೂಚನೆ || ಪರಮಯೋಗಾಭ್ಯಾಸವನು ಸಂ
ಗರದುಭಯಬಲಮಧ್ಯದಲಿ ಮುರ
ಹರನು ಕಾರುಣ್ಯದಲಿ ಕಲಿ ಪಾರ್ಥಂಗೆ ಬೋಧಿಸಿದ ||

ಆವನೊಬ್ಬನು ಕರ್ಮಫಲವನು
ಭಾವಿಸದೆ ಕರ್ಮವನು ಮಾಡುವ
ನಾಪನವ ಸನ್ಯಾಸಿಯೇ ವರಯೋಗಿ ಯೆನಿಸುವನು |
ಕೇವಲಾಗ್ನಿತ್ಯಾಗ ಸತ್ಕ
ರ್ಮಾವಳಿತ್ಯಾಗವನು ಮಾಡದ
ಪಾವನನೆ ಲೋಕದೊಳಗುತ್ತಮನೆಂದನಸುರಾರಿ ||

ಎಲೆಧನಂಜಯ ಆವುದೊಂದನು
ತಿಳಿದವರು ಸನ್ಯಾಸವೆಂಬರು
ನೆಲೆಗದನು ವರಯೋಗವೆಂದರಿ ಸಂಗವಿಲ್ಲಾಗಿ |
ಫಲದ ಸಂಕಲ್ಪವ ಬಿಡದೆ ತಾ
ನೊಲಿದು ಕರ್ಮವ ಮಾಡುವಾಚಂ
ಚಲನದೆಂದುಂ ಯೋಗಿಯಾಗನು ಪಾರ್ಥ ಕೇಳೆಂದ ||

ಯೋಗವನು ಬಯಸುವ ಮುನಿಗೆ ನಿಗ
ಮಾಗಮದ ಸತ್ಕರ್ಮವೇ ವರ
ಯೋಗಸಿದ್ಧಿಗೆ ಪರಮಕಾರಣವೆನಿಸುವುದು ನೋಡು |
ಯೋಗಸಿದ್ಧಿಯನೈದಿ ದಾತಂ
ಗಾಗ ಸಮ್ಯಗ್ಜ್ಞಾನ ತನ್ನೊಳ
ಗಾಗಲಾವರಶಾಂತಿ ಸಾಧನವೆನಿಸುತಿಹುದೆಂದ ||

ಭೋಗಿಸುವ ಶಬ್ದಾದಿವಿಷಯದ
ಯೋಗದಲಿ ಸಂಬಂಧಿಸದೆ ಯಾ
ವಾಗಲುಂ ಕಾಮ್ಯಾದಿಕರ್ಮಂಗಳಲಿ ಸಿಲುಕದೆಯೆ
ನೀಗಿದವನು ಮನೋರಥವ ನೆರೆ
ಯೋಗಸಿದ್ಧಿಯನುಳ್ಳವನು ತಾ
ನಾಗ ಪರಮಾರೂಢನೆನಿಸುವ ಪಾರ್ಥ ಕೇಳೆಂದ ||

ತನ್ನನುದ್ಧರಿಸುವುದು ತನ್ನಿಂ
ಮುನ್ನ ತನ್ನಂ ಕೆಡಿಸಲಾಗದು
ತನ್ನ ನಿಜವನು ತಾನು ತಿಳಿಯಲು ತನಗೆ ತಾ ಬಂಧು |
ತನ್ನ ತಾನು ವಿಚಾರಿಸದೆ ಜಡ
ಭಿನ್ನಭಾವದಲಿರಲವಿದ್ಯಾ
ಪನ್ನಪದದಿಂ ತನಗೆ ತಾ ಹಗೆಯಪ್ಪು ಕೇಳೆಂದ ||

ಆವನಂತಃಕರಣ ತನ್ನವ
ಶಾವಲಂಬನವಾಗಿಹುದು ಕೇ
ಳ್ಬಾವಿಸಲ್ಕವ ತನಗೆ ತಾನೇ ನೆಂಟನಾಗಿಹನು |
ಈವಿಧದ ಕರ್ಮಗಳಾವನ
ತಾವು ಪ್ರತಿಕೂಲಂಗಳಾಗಿಯೆ
ನೋವಡರಿಪುವು ತನಗೆ ತಾನವ ನಹನು ಹಗೆಯಂತೆ ||

ಚಳಿ ಬಿಸಿಲು ಸುಖ ದುಃಖ ಪೂಜಾ
ವಳಿ ತಿರಸ್ಕಾರಂಗಳಲಿ ನೆರೆ
ಗೆಲಿದ ಚಿತ್ತವನುಳ್ಳಯೋಗಿಗೆ ಪರಮಶಾಂತಂಗೆ |
ತಿಳಿಯೆ ಕೇಳು ಪರಂಪರೆಗಳನು
ಕಳಿದ ಪರಮಾರೂಢಚಿತ್ತಗೆ
ಬೆಳಗು ನಿಜವಪರೋಕ್ಷವಾಗಿಹುದೆಂದನಸುರಾರಿ ||

ಸಕಲ ಶಾಸ್ತ್ರಜ್ಞಾನದಿಂ ವರ
ಮುಕುತಿಕರ ಸುಜ್ಞಾನತೃಪ್ತನು
ವಿಕಳನಾಗದೆ ಹೊನ್ನು ಕಲು ಹಿಂಟೆಯಲಿ ಸಮನಾಗಿ |
ವಿಕರಿಸುವ ಸಕಲೇಂದ್ರಿಯಂಗಳ
ನಿಕರವನು ಗೆದ್ದವನು ಚಲಿಸದ
ಭಕತನೇ ನಿಜಯುಕುತನೆನಿಸುವ ನೆಂದನಸುರಾರಿ ||

ಪ್ರಿಯಸಖನು ಹಗೆ ಬಂಧುಜನಗಳು
ನಿಯತ ಯತಿ ಮಧ್ಯಸ್ಥಸಾತ್ವಿಕ
ನಯವಿದರು ಸಾಧುಗಳು ಪಾಪಿಷ್ಟರುಗಳಲಿ ಸಮದ |
ಭಯವಳಿದ ನಿಜಬುದ್ಧಿಯಿಂ ನಿ
ಶ್ಚಯದಲೇ ಪರಮಾತುಮನ ನಿ
ರ್ಣಯವ ಕಂಡವನೇ ವಿಶಿಷ್ಟನು ಪಾರ್ಥಕೇಳೆಂದ ||

ನಿಯತಚಿತ್ತವನು ನಿಜಪರಿಗ್ರಹ
ಭಯವ ಬಿಟ್ಟಾಸೆಗಳನುಳಿದಿರ
ಭಯವನುಳಿ ದಸಹಾಯನಾ ಗೇಕಾಂತವಾಸವನು |
ಬಯಸುತಿಹ ವರಯೋಗಿಯಾತ್ಮನ
ನಯದಿ ಪರಮಾತುಮನೊಡನೆ ಸಂ
ಶಯುವ ಕಳೆದೇಕತ್ವದಿಂ ಧ್ಯಾನಿಸುವ ಕೇಳೆಂದ ||

ಶುದ್ಧವಾಗಿಹ ಠಾವಿನಲಿ ನೆರೆ
ಯುದ್ಧವಿಲ್ಲದೆ ಹ್ರಸ್ವವಲ್ಲದೆ
ಹೊದ್ದಿಸುಸ್ಥಿರನಾಗಿ ಚೇಲಾಜಿನಕುಶಗಳಿಂದ |
ಗದ್ದುಗೆಯ ನಳವಡಿಸಿ ಮಿಗೆ ಕು
ಳ್ಳಿರ್ದು ಪರಮಾತುಮನ ಧ್ಯಾನವ
ಬುದ್ಧಿಯಿಂದಳೆ ಮಾಡ್ದುವುದು ಕಳಿಪಾರ್ಥ ಕೇಳೆಂದ ||

ಅದರ ಲತಿಲೇಸಾಗಿ ತಾ ಮಿಗೆ
ಹದುಳದಿಂ ಕುಳ್ಳಿರ್ದುಚಿತ್ತದೊ
ಳೊದವಿದಖಿಳೇಂದ್ರಿಯದ ವ್ಯಾಪಾರಂಗಳನು ಬಿಟ್ಟು |
ಮುದದಲಂತಃಕರಣ ಶುದ್ಧಿಯ
ನೊದವಿಸಲಿಕೋಸುಗರ ಯೋಗದ
ಹದನ ನರಿದಾಚರಿಸುವುದು ಕಲಿ ಪಾರ್ಥ ಕೇಳೆಂದ ||

ಕಾಯ ಶಿರ ಕೊರಳುಗಳನೊಂದೇ
ದಾಯದಲಿ ಸಮನಾಗಿ ಚಲಿಸದೆ
ವಾಯುಧಾರಣೆಯಿಂದ ನೆಟ್ಟನೆ ನಿಲಿಸಿ ದೆಸೆಗಳನು |
ಹಾಯುತಲಿ ನೋಡುತ್ತಿರದೆ ಕೌಂ
ತೇಯ ತನ್ನಯ ನಾಸಿಕಾಗ್ರವ
ನಾಯತದಲೀಕ್ಷಿಸುತ ಧ್ಯಾನವ ಮಾಡುತಿಹುದೆಂದ ||

ಹದುಳಿಸಿದ ವರಚಿತ್ತವುಳ್ಳವ
ನೊದವಿದಂಜಿಕೆಯಿಲ್ಲದೇ ಶ್ರುತಿ
ವಿದಿತವಿಮಲ ಬ್ರಹ್ಮಚರ್ಯವ್ರತವ ಚರಿಸುತಿಹ |
ತುದಿಗೆ ಮನವನು ನಿಲಿಸಿ ಯೆನ್ನಲಿ |
ಪುದಿದಚಿತ್ತವನುಳ್ಳ ಯೋಗಿಯು
ಮುದದಲೆನ್ನಲಿ ಲೀನವಾಗಿಹನೆಂದನಸುರಾರಿ ||

ಈಪರಿಯ ನಿಯಮಿಸಿದ ಚಿತ್ತದ
ರೂಪವುಳ್ಳವನಾಗಿ ಬ್ರಹ್ಮದ
ರೂಪನನುದಿನ ಚಿಂತಿಸುತ ವರಯೋಗಿಯಾದವನು |
ತಾಪವಳಿದೆನ್ನಯ ಪರಮಸುಖ
ರೂಪವನು ಕೂಡಿರ್ದು ನಿಜಚಿ
ದ್ರೂಪವೆನಿಸುವ ಶಾಂತಿಪದವನು ಪಡೆವ ಕೇಳೆಂದ ||

ಎಲೆಧನಂಜಯ ಯೋಗವೆಂಬುದು
ನೆಲೆಗೆ ಮಿಗಿಲಾಹಾರಿಗೆಯು ನಿ
ಶ್ಚಲನಿರಾಹಾರಿಗೆಯು ನಿದ್ರಾಶೀಲಗನವರತ |
ಬಲುಹಿನಿಂ ಜಾಗರವ ಮಾಡುವ
ಛಲಿಗೆ ನಿಜಸುಖದಿಂದ ಯೋಗವು
ಫಲಿಸುವುದು ತಾನಿಲ್ಲ ಕೇಳೆಂದನು ಮುರಧ್ವಂಸಿ ||

ಸಾರಯುಕ್ತಾಹಾರ ವುಚಿತವಿ
ಹಾರವುಳ್ಳಾತಂಗೆ ನಿರ್ಮಳ
ಚಾರುಕರ್ಮಂಗಳಲಿ ನಿಯತಕ್ರಿಯೆಯನುಳ್ಳಂಗೆ |
ಭೂರಿನಿದ್ರಾ ಜಾಗರಣೆಗಳ
ಸೇರದಿಹ ಧೀರಂಗೆ ದುಃಖದ
ಜೇರ ಕೆಡಿಸುವ ಯೋಗ ದೊರಕುವುದೆಂದನಸುರಾರಿ

ಆವನೊಬ್ಬನ ನಿಯತಚಿತ್ತವು
ಪಾವನಾತುಮನಲ್ಲಿಯೇ ಸ
ದ್ಭಾವದಿಂ ನೆಲಸಿಹುದು ಬಳಿಕ ವಿರಕ್ತನಾದವನು |
ಈವಿವಿಧವಿಷಯಂಗಳನು ನೆರೆ
ಹೇವದಿಂದಾವಾಗ ಬಿಟ್ಟಿಹ
ಭಾವ ನೆಲೆಗೊಂಡಾಗಲವ ವರಯುಕ್ತನೆನಿಸುವನು ||

ನಿಯತಚಿತ್ತವನುಳ್ಳವಂಗನು
ನಯದಲಾತ್ಮಧ್ಯಾನವನು ನಿ
ಶ್ಚಯದಿ ಮಾಳ್ಪಾತಂಗೆ ವರದೃಷ್ಟಾಂತವೆಂತೆನಲು |
ಭಯವಳಿದ ಯೋಗಿಗೆ ನಿವಾತಾ
ಲಯದಲಿಹ ದೀವಿಗೆಯವೊಲು ನಿ
ರ್ಭಯದಲಲುಗದೆ ಯಿಹುದದೇ ದೃಷ್ಟಾಂತ ಕೇಳೆಂದ ||

ಆವವಸ್ಥೆಯಲನುಪಮದ ಯೋ
ಗಾವಲಂಬನದಿಂದ ಚಿತ್ತವು
ಠಾವಿನಲ್ಲಿ ನೆರೆ ನಿಂದು ಲಯುವಹುದಾವ ಕಾಲದಲಿ |
ಭಾವಿಸಲಿಕಾ ತುಮನ ನಾತ್ಮದ
ಲಾವನೊಬ್ಬನು ಕಾಣುತಿಹನಾ
ಪಾವನನು ತನ್ನಲ್ಲಿ ತೃಪ್ತಿಯ ಪಡೆವ ಕೇಳೆಂದ ||-

ಚರಿಸುತಿಹ ಕರಣಂಗಳಿಗೆ ಗೋ
ಚರಿಸದೇ ವರಶುದ್ಧಬುದ್ಧಿಗೆ
ನಿರುತದಿಂ ಗೋಚರಿಸುತಿಹ ನಿಜನಿತ್ಯಸೌಖ್ಯವನು |
ಹರುಷದಿಂದಾವಾಗ ಪಡೆದಿಹ
ಪರಮತತ್ವಸ್ಥಿತನೆನಿಸಿ ನೆರೆ
ಭರದಿಯೋಗದಿ ಚಲಿಸದಿಹನ್ನೈ ಪಾರ್ಥಕೇಳೆಂದ ||

ಆವಸುಖವನು ಪಡೆದಿಹುದರಿಂ
ಪಾವನೋತ್ತಮ ವನ್ಯಲಾಭವು
ಭಾವಿಸಲ್ಕಿಲ್ಲೆಂದು ನೆಟ್ಟನೆ ಬಗೆದು ಸೌಖ್ಯವನು |
ಜೀವಿಸುತ್ತಿದ್ದನು ಭವಬಹು
ಭಾವದುಃಖಂಗಳಿಗೆ ತಾ ಸ
ದ್ಭಾವದಿಂ ಸಂಚಲಿಸದಿಹ ನೆಲೆ ಪಾರ್ಥ ಕೇಳೆಂದ ||

ಸಕಲತಾಪತ್ರಯದ ದುಃಖ
ಪ್ರಕರ ಸೋಂಕಲು ಕೆಡದೆ ತಾನೀ
ನಿಖಿಲಯೋಗದ ಹೆಸರನುಳ್ಳದಿದೆಂದು ನೆರೆ ತಿಳಿದು |
ಸುಕರದಿಂ ಸಂಗ್ರಹಿಸಿ ಯೋಗವ
ಚಕಿತನಲ್ಲದ ಪುರುಷನೀವರ
ಯುಕುತಿಯಿಂದವೆ ಮಾಡ ಬೇಹುದು ಪಾರ್ಥ ಕೇಳೆಂನ ||

ಘನಮನೋರಥದಿಂದ ಹುಟ್ಟಿದ
ತನುಧನಾದಿ ಸಮಸ್ತವಿಷಯುವ
ನನಿತನುಳುಹದೆ ಬಿಟ್ಟು ವಶವಾಗಿಹ ಮನಸಿನಿಂದ |
ಅನವರತ ವಿಷಯಂಗಳೊಳಗಿ
ದ್ದನಿತು ಸಕಲೇಂದ್ರಿಯುವ ಮುದದಿಂ
ಘುನಿಪನೆಲ್ಲಾ ಕಡೆಗಳಿಂ ನಿಗ್ರಹಿಸಬೇಕೆಂದ ||

ಮೆಲ್ಲಮೆಲ್ಲನೆ ಧೈರ್ಯದಿಂ ತ
ನ್ನಲ್ಲಿ ನೆಲಸಿದ ಬುದ್ಧಿಯಿಂದವೆ
ನಿಲ್ಲದೇ ಚರಿಸುವ ಮನವ ಪರಮಾತ್ಮನಲಿ ನಿಲಿಸಿ |
ದುರ್ಲಲಿತವಿಷಯಂಗಳನು ತಾ
ನೊಲ್ಲದೇ ನೆರೆ ತಿರುಗಿ ಯನ್ಯವ
ನೊಲ್ಲಿಸದೆ ಚಿಂತಿಸದೆ ಸುಖಿಯಾಗಿಹುದು ಕೇಳೆಂದ ||

ಅನವರತ ಚಂಚಲಿಸುವಸ್ಥಿರ
ವೆನಿಸುವಾವಾವಿಧದ ವಿಷಯದ
ಘನತೆಯಲಿ ನೆಲಸಿಹುದೊ ತತ್ತದ್ವಿಷಯದಿಂ ತೆಗೆದು |
ಮನವನತಿ ವೈರಾಗ್ಯದಿಂದಾ
ತ್ಮನಲಿ ವಶನು ಮಾಡಲದಂ
ಜನಿಸುವುದು ವರಶಾಂತಿ ಕೇಳೆಂದನು ಮುರಧ್ವಂಸಿ ||

ಪರಮಶಾಂತಿಯು ದೊರಕಿದಂತಃ
ಕರಣವುಳ್ಳಾತನ ರಜೋಗುಣ
ಹರಿದು ಹೋದಾತನನು ಪಾಪಂಗಳು ತೊಲಗಿ ಬಳಿಕ |
ಪರಮು ತಾನಾಗಿದ್ದ ಯೋಗಿಯ
ಪಿರಿದು ಸುಖ ಸಾರುವುದು ಮುದದಿಂ
ಧರಿತ್ರಿಭಯಂಕರ ಕೇಳು ನೀನೆಂದನು ಮುರಧ್ವಂಸಿ ||

ಈಪರಿಯುಲನವರತ ಚಿತ್ತವ
ನಾಪರಮಯೋಗದಲಿರಿಸಿ ನಿ
ಷ್ಪಾಪನುತ್ತಮಯೋಗಿ ನಿತ್ಯಾನಂದಮಯುವೆನಿಪ |
ಆಪರಬ್ರಹ್ಮಾ ಪರೋಕ್ಷದಿ
ತಾಪ ಮೂರನು ಗೆಲಿದು ನಿಜದಿಂ
ತಾ ಪಡೆವ ನುರುತರದ ಸುಖವನು ಪಾರ್ಥಕೇಳೆಂದ ||

ಪರಮಯೋಗಿಾಭ್ಯಾಸದಂತಃ
ಕರಣವುಳ್ಳವನಾಗಿ ಸಚರಾ
ಚರದಲಿಹ ಪರಬೊಮ್ಮ ವೊಂದೆಂದರಿದ ವರಯೋಗಿ |
ನಿರುತದಿಂ ದೀಸಕಲಭೂತವ
ನಿರದೆ ತನ್ನಲಿ ಕಾಂಬ ತನ್ನನು
ಪಿರಿದು ಭೂತಂಗಳಲಿ ಕಾಂಬನು ಪಾರ್ಥ ಕೇಳೆಂದ ||

ಆವನೊಬ್ಬನು ಸರ್ವಭೂತದ
ಠಾವಿನಲಿ ಯೆನ್ನನು ನಿರೀಕ್ಷಿಪ
ದೇವ ಮನುಜೋರಗರುಗಳನೆನ್ನಲ್ಲಿ ಕಾಣುವನು |
ಅವನಾತಂಗಾನು ಕೆಡದಿಹೆ
ಭಾವಿಸಲು ಕೇಳಾತ ನೆನಗಿ
ನ್ನಾವ ಪರಿಯಲಿ ಕೆಡುವನಲ್ಲೆಲೆ ಪಾರ್ಥ ಕೇಳೆಂದ ||

ಆವನೊಬ್ಬನು ಸರ್ವಭೂತದ
ಜೀವನಾತುಮ ನೊಬ್ಬನೆಂದೇ
ಭಾವದಿಂದೆನ್ನನೆ ಭಜಿಸುತಿಹ ನಾಪರಮಯೋಗಿ |
ಆವ ಪರಿಯಲಿ ವರ್ತಿಸುತಲುಪ
ಜೀವಿಸಲು ಮೆನ್ನಲ್ಲಿ ತಾ ನಿಜ
ಭಾವದಿಂ ವರ್ತಿಸುತಿಹನು ಕಲಿಪಾರ್ಥ ಕೇಳೆಂದ ||

ಘನತರದ ಸುಖದುಃಖ ತನ್ನಯ
ತನುಮನಂಗಳ ತಾಗುವಂದದ
ಲನಿತು ಭೂತಂಗಳನು ಸೋಂಕುವುದೆಂದು ತಾ ತಿಳಿದು ||
ಜನಕೆ ದುಃಖಂಗಳನು ಮಾಡದೆ
ಚಿನುಮಯಾತ್ಮ ಜ್ಞಾನಿಯಾದವ |
ಮುನಿಗಳೊಳಗತ್ಯಧಿಕ ನೆನ್ನಭಿಮತವು ಕೇಳೆಂದ ||

ಮಧುರಿಪುವೆ ಮುದದಿಂದ ಚಿತ್ತದ
ಲೊದವಿ ತೋರುವ ಸಮತೆಯೆಂಬೀ
ವಿದಿತಯೋಗವ ಕರುಣಿಸಿದೆ ನೀನೆಂತಹದಲಾನು |
ಹದುಳದಿಂದಿಹಗತಿಯ ಕಾಣೆನು
ಮೊದಲಲೀಮನ ಚಲಿಸುತಿಹುದಾ
ಹದನ ನೀನೇ ಬಲ್ಲೆ ಚಿತ್ತೈಸೆಂದನಾ ಪಾರ್ಥ ||

ಕಾಡುವುದು ಬಲಿದಿಹುದ ನಿಜದಲಿ
ಮಾಡಬಾರದು ಚಲಿಸುತಿಹುದತಿ
ಗಾಢಗರ್ವಿತವಾಗಿಹುದು ಮನ ವಡುನಿಮಿತ್ತದಲಿ |
ಓಡುತಿಹ ವಾಯುವಿನವೋಲ
ಲ್ಲಾಡುತಿಹ ಮನವನು ನಿರೋಧವ
ಮಾಡಲಸದಳವೆಂದು ಬಗೆವೆನು ಕೃಷ್ಣ ಕೇಳೆಂದ ||

ವಿಲೆಧನಂಜಯ ಮನವು ನೆರೆ ಚಂ
ಚಲಿಸುವುದು ಸಂದೇಹವಿಲ್ಲದೆ
ಚಲಿತಮಾನಸಜನರು ನಿಗ್ರಹಿಸಲಿಕೆ ತಾನರಿದು |
ನೆಲೆಗೆ ನೀನರಿ ಯೋಗಸೇವಾ
ಬಲದಿ ಘನವೈರಾಗ್ಯದಿಂ ಚಂ
ಚಲಿಪಮನವ ನಿರೋಧಿಸಲು ಬಹು ದೆಂದನಸುರಾರಿ ||

## ಷಷ್ಠಾಧ್ಯಾಯಂ

ಮನವಿಕಾರವನಿಲಿಸಲರಿಯದ
ತನುವಿಕಾರದ ಮನುಜನಿಂಮುಂ
ದನುಪಮದ ವರಯೋಗ ಪಡೆಯಲು ಬಾರದಿದು ಸಿದ್ಧ |
ಮನವ ವಶವನು ಮಾಡಿದವನಿಂ
ವಿನುತಯೋಗವುಪಾಯದಿಂ ನೆ
ಟ್ಟನೆ ಸುಸಾಧವದೆನಿಸುವುದು ತಾನೆನ್ನ ಮತವೆಂದ ||

ಅಯತಿ ಯೋಗಾಭ್ಯಾಸದಿಂ ನಿ
ಶ್ಚಯದಿ ಚಲಿಸಿದ ಮನವನುಳ್ಳವ
ನಯದಿ ಯೋಗದ ಭಕ್ತಿಯುಳ್ಳವ ಯೋಗಸಿದ್ಧಿಯನು |
ನಿಯಮದಿಂ ತಾ ಪಡೆಯದೇ ನಿ
ರ್ಭಯದಲೈದುವನಾವ ಗತಿಯಂ
ಪ್ರಿಯದಿ ಕರುಣಿಸು ಕೃಷ್ಣ ನೀನೆನಗೆಂದನಾಪಾರ್ಥ ||

ಎಲೆಜನಾರ್ದನ ಬ್ರಹ್ಮಯೋಗದ
ಹೊಲಬನರಿಯದೆ ಕರ್ಮವನು ತಾ
ನೊಲಿದು ಬಿಟ್ಟುದರಿಂದಲುಭಯಭ್ರಷ್ಟನಾದವನು |
ಹಲವುಪರಿಯಿಂ ಹರಿವ ಮೇಘದ
ವೊಲು ಕೆಡುವನೋ ಸದ್ಗತಿಯ ತಾ
ನೆಲಗೆ ಪಡೆವನೊ ಕೃಷ್ಣ ಕೃಪೆಮಾಡೆಂದನಾಪಾರ್ಥ ||

ಎನಿತು ಸಂಶಯವೆನ್ನ ಮನದಲಿ
ಜನಿಸಿಹುದು ನಿಶ್ಶೇಷವಾಗಿಯೆ
ಅನಿತುವನು ಪರಿಹರಿಸಬೇಹುದು ಶಕ್ತನೀನಾಗಿ |
ಘನತರದ ಸಂಶಯವ ಕೆಡಿಸುವೊ
ಡನಘ ನಿನ್ನಿಂದನ್ಯರಿಲ್ಲಲೆ
ಯೆನಗೆ ಕೃಪೆಮಾಡೆಂದು ನುಡಿದನು ಪಾರ್ಥ ಕೈಮುಗಿದು ||

ತಂದೆ ಕೇಳೈ ಪಾರ್ಥಭಕ್ತಿಯೊ
ಳೊಂದಿ ಯೋಗಭ್ರಷ್ಟನಾದವ
ಗೆಂದಿಗೂ ಕೇಡಿಲ್ಲ ವಿಹಪರಗಳಲಿ ಮಂಗಳವ |
ಸಿಂದು ಮಾಡಿದ ನರನು ದುಃಖವ
ನೆಂದಿಗೂ ತಾ ಪಡೆಯನೈ ಕುರು
ನಂದನನೆ ತಿಳಿಯೆಂದನಾಮುರವೈರಿ ಕರುಣದಲಿ ||

ಯೋಗಮಾರ್ಗ ಭ್ರಷ್ಟನಾದವ
ನಾಗಲುರುಪುಣ್ಯವನು ಮಾಡಿದ
ಭೋಗಿಗಳ ಲೋಕವನು ಗೆಡೆದವ ನಿತ್ಯವಾಗಿಹುದ |
ಭೋಗಿಸುತ ಪಲಕಾಲಮಿರ್ದದ
ನೀಗಿ ಶುಚಿಗಳ ಶ್ರೀಯನುಳ್ಳನು
ರಾಗಿಗಳ ಮನೆಯಲ್ಲಿ ಜನಿಸುವ ಪಾರ್ಥಕೇಳೆಂದ ||

ಅಲ್ಲದಿರ್ದೊಡೆ ತತ್ವವಿದ್ಯೆಯು
ಬಲ್ಲಯೋಗೇಶ್ವರರ ವರಕುಲ
ದಲ್ಲಿ ಜನಿಸುವ ಲೋಕದಲಿ ನೋಡೀಪ್ರಕಾರದಲಿ |
ಸಲ್ಲಲಿತವಹ ಯೋಗಿಗಳ ಕುಲ
ದಲ್ಲಿ ಜನಿಸುವ ಪುಣ್ಯತಾನತಿ
ದುರ್ಲಭವಲಾ ಪಾರ್ಥ ಕೇಳೆಂದನು ಮುರಧ್ವಂಸಿ ||

ಅದರಲುದಯಿಸಿ ಪೂರ್ವದೇಹದ
ಲೊದವಿಕೊಂಡಿಹ ಬುದ್ಧಿಯೋಗದ
ಪದದ ಸಂಬಂಧವನು ಪಡೆವನು ಪಡೆದನಂತರದಿ |
ವಿದಿತದಿಂ ವರಮೋಕ್ಷ ಸೌಖ್ಯದ
ಪದವೆನಿಸುತಿಹ ಯೋಗಸಿದ್ಧಿಗೆ
ಮುದದಿ ಮುಗುಳುದ್ಯೋಗಿಸುವ ನೆಲೆಪಾರ್ಥ ಕೇಳೆಂದ ||

## ಷಷ್ಠಾಧ್ಯಾಯಂ.

ತನ್ನ ತಾ ಮರೆದಿರ್ದೊಡೆಯುಂ ತಾ
ಮುನ್ನ ಮಾಡಿದ ಯೋಗವಾಸನೆ
ಯನ್ನ ಕೆಳಸದೆ ಮರಳಿ ತನ್ನ ಭಿಮುಖವ ಮಾಡುವುದು
ಉನ್ನತಜ್ಞಾನೇಚ್ಛೆಯಿಂ ಸಂ
ಪನ್ನ ಜಿಜ್ಞಾಸದಲಿ ವೇದದ
ಧನ್ಯಫಲದಿಂ ದಧಿಕಫಲವನು ಪಡೆವ ಕೇಳೆಂದ ||

ಅತಿಭರದಿ ಯತ್ನವನು ಮಾಡುತ
ಸತತಯೋಗಾಭ್ಯಾಸಿಯಾಗಿಹ
ಮತಿಯುತನು ಪಾಪಂಗಳಿಂ ನಿರ್ಲೇಪತಾನಾಗಿ |
ಯತಿ ಹಲವುಜನ್ಮಂಗಳಗಲಿಸಂ
ತತ ಮಹಾವಾಕ್ಯಾರ್ಥದಿಂ ನಿ
ಶ್ಚಿತನು ಪರವಹ ಗತಿಯನೈದುವ ಪಾರ್ಥ ಕೇಳೆಂದ ||

ಎಲೆಧನಂಜಯ ಯೋಗಿ ಕರ್ಮದ
ಫಲವಬಯಸುವರಿಂದಲಧಿಕನು
ಸಲೆ ತಪಸ್ವಿಗಳಿಂದಲಧಿಕನು ಕಾಲವನು ಬಲ್ಲ |
ಹಲವು ಜ್ಞಾನಿಗಳಿಂದಲಧಿಕನು
ನೆಲೆಗೆ ತಾನದುಕಾರಣದಲೆಲೆ
ಫಲುಗುಣನೆ ವರಯೋಗಿ ಯಾಗೆಂದನು ಮುರಧ್ವಂಸಿ ||

ಆವನೊಬ್ಬನು ಭಕ್ತಿಯಿಂ ನೆರೆ
ಪಾವನನು ತಾನಾಗಿ ಯೆನ್ನಲಿ
ಭಾವ ಭೇದವನುಳಿದು ಮನದಿಂದೆನ್ನ ನನವರತ |
ಸೇವಿಸುತಲಿರ್ಪವನು ಸರ್ವಗು
ಣಾವಳಿಯ ಯೋಗಿಗಳೊಳುತ್ತಮ
ಪಾವನನು ತಾನೆಂಬುದೆನ್ನಭಿಮತವು ಕೇಳೆಂದ

— ಇಂತು ಅಭ್ಯಾಸಯೋಗವೆಂಬ ಷಷ್ಠಾಧ್ಯಾಯಂ ಸಂಪೂರ್ಣಂ —

# ಸಪ್ತಮಾಧ್ಯಾಯಂ

ಸೂಚನೆ || ಪರಮನಲಿ ಮೂಲಪ್ರಕೃತಿಯಂ
ಕುರಿಸಿ ತತ್ವದಿ ಬೆರಸಿ ಜೀವನ
ಪರವೆನಿಸಿದಂದವನು ಹರಿ ಪಾರ್ಥಂಗೆ ಕರುಣಿಸಿದ ||

ಕೇಳೆಧನಂಜಯ ಎನ್ನಲೇ ನಿ
ಶ್ಚಲದ ಮನವುಳ್ಳವನೆನಿಸಿ ನಿ
ರ್ಮಲದಲೆನ್ನಯ ಪದವ ಬಿಡದಾಶ್ರೈಸಿ ಯೋಗವನು |
ಒಲಿದುಮಾಡುತ್ತಿರಲು ಸಂಶಯ
ತೊಲಗಿ ಯೆನ್ನನು ಪೂರ್ಣನನು ನೀ
ನೊಲವಿನಿಂದೆಂತರಿವೆ ಕೇಳದನೆಂದನಸುರಾರಿ ||

ಆವುದನು ನೀನರಿಯುತಿಹೆ ಮಗು
ಳಾವುದದರಿಂದನ್ಯವೆನಿಸುವ
ಪಾವನದ ಶಾಸ್ತ್ರಂಗಳಂ ನೀನರಿಯಬೇಡದನು |
ಆಫಲೋಕದೊಳಿಲ್ಲೆನಿಪುದಂ
ತಾವಿವೇಕಜ್ಞಾನವನು ಶಾ
ಸ್ತ್ರಾವಲಂಬನದಿಂದ ಲಧಿಕವನೊರೆವೆ ಕೇಳೆಂದ ||

ಮನುಜರೊಳು ಲಕ್ಷದೊಳಗೊಬ್ಬನು
ತನಗೆ ಮೋಕ್ಷೋಪಾಯಕೆನ್ನನು
ನೆನೆಯಲುದ್ಯೋಗಿಸುವನಿಂತೀಲಕ್ಷ ಹಲಬರೊಳು |
ಚಿನುಮಯಾತುಮ ನೆನಿಸುವೆನ್ನನು
ಘನಸುಕೃತ ಸಂಪನ್ನನೆನಿಸುವ
ಮುನಿಪನೊಬ್ಬನು ನಿಶ್ಚಯಾರ್ಥದಲರಿವ ಕೇಳೆಂದ ||

## ಸಪ್ತಮಾಧ್ಯಾಯಂ.

ಎನ್ನ ಯೋಗದ ಮಾಯೆ ತಾನೇ
ಭಿನ್ನವಾಗಿಹುದೆಂತೆನಲು ಸಂ
ಪನ್ನಧರೆ ಜಲ ವನಲ ಮಾರುತ ನಭ ಮನೋಬುದ್ಧಿ |
ಉನ್ನತದಹಂಕಾರವೀಪರಿ
ತನ್ನಲೆಂಟಾಗಿಹುದು ಗುಣಸಂ
ಪನ್ನದಿಂ ಮೆರೆವುದು ಚರಾಚರನಾಮರೂಪದಲಿ ||

ಈಪರಿಯಲೆಂಟಾಗಿ ತೋರುವ
ರೂಪಿನಪರಪ್ರಕೃತಿಯಿದರಿಂ
ದೀಪಿಸುತ ಬೇರೆನಿಸಿ ತೋರುಗು ಜೀವರೂಪದಲಿ |
ಆಪರಪ್ರಕೃತಿಯೆ ಕಣಾತ
ದ್ರೂಪದಿಂದೀಸಕಲಜಗವನು
ವ್ಯಾಪಿಸಿಯೆ ನೆರೆ ಧರಿಸಿಹುದು ಕಲಿ ಪಾರ್ಥ ಕೇಳೆಂದ ||

ಈಸಕಲಸಚರಾಚರಕ್ಕೆಯು
ತಾ ಸಸಿನೆಯಿಾ ಯೆರಡುಪ್ರಕೃತಿಯೆ
ಲೇಸು ಕಾರಣವೆಂದು ನಿರ್ಧರಿಸುವುದೆಲಗೆ ನೀನು |
ಈಸಮಸ್ತಜಗಕ್ಕೆ ಜನನನಿ
ವಾಸವದರಿಂ ಮೇಲೆ ಬಳಿಕ ವಿ
ನಾಶಕಾರಣವಾಗಿಹೆನು ಕಲಿಪಾರ್ಥ ಕೇಳೆಂದ ||

ಎಲೆಧನಂಜಯ ಎನ್ನದೆಸೆಯಿಂ
ನೆಲೆಗೆ ಬೇರೊಂದಧಿಕವಿಲ್ಲತಿ
ಸುಲಲಿತದ ವರಸೂತ್ರದಲಿ ಮಣಿನಿಕರದಂದದಲಿ |
ಚಲವೆನಿಸುವ. ಗುಣಂಗಳಿಂದೀ
ಹಲವು ಜಗವೆನ್ನಲ್ಲಿಪರಿವೆಡಿ
ಯಲಿ ನೆಲಸಿಮೆರೆಯುತ್ತಿಹುದು ಕಲಿ ಪಾರ್ಥ ಕೇಳೆಂದ ||

ಉದಕದಲಿ ರಸ ರವಿಶಶಿಗಳಲಿ
ಸದಮಲಪ್ರಭೆಸಕಲಶ್ರುತಿಗಳ
ಮೊದಲೊಳೋಂಕಾರಸ್ವರೂಪನು ಗಗನದಲಿ ಶಬ್ದ |
ಒದವಿದೀಮನುಜರೊಳು ಪೌರುಷ
ಪದವಿ ತಾನಾಗಿಹೆನು ಕುಂತೀ
ಸುದತಿಯಾತ್ಮಜ ಕೇಳು ಸರ್ವಾತ್ಮಕನು ನಾನೆಂದ ||

ಭೂಮಿಯಲಿ ಪಾವನದ ಪರಿಮಳ
ವಾಮಹಾಗ್ನಿಯೊಳಮಲತೇಜವು
ಈಮನುಜರೊಳಗಖಿಲಪ್ರಾಣಿಗಳೊಳಗೆ ಜೀವನವು |
ಆಮಹಾಮುನಿಗಳಲಿ ತಪಸಿನ
ಸೀಮೆ ನಾನಾಗಿಹೆನು ಕೇಳೆಲೆ
ಭೂಮಿಪಾಲರೊಳಧಿಕ ಪಾಂಡುಕುಮಾರ ನೀನೆಂದ ||

ಎಲೆಧನಂಜಯ ಬುದ್ಧಿವಂತರು
ಗಳಿಗೆ ಜ್ಞಾನದ ಬುದ್ಧಿಯಾಗಿಹೆ
ಸಲೆ ಮಹಾತೇಜಸ್ವಿಗಳಲಿಹ ತೇಜವಾಗಿಹೆನು |
ನೆಲೆಗೆ ನಾನೇ ಸಕಲ ಭೂತಂ
ಗಳಿಗೆ ಜನನಕೆ ನಿತ್ಯವಾದ
ಸ್ಖಲಿತಕಾರಣರೂಪನೆಂದರಿ ಯೆಂದನಸ್ಸುರಾರಿ ||

ಕಾಮರಾಗಾದಿಗಳಳಿದ ನಿ
ಸ್ಸೀಮ ಬಲವಾಗಿಹೆನು ಕೇಳು
ದ್ದಾಮ ಬಲವಂತರಿಗೆ ನಾನು ಸಮಸ್ತಭೂತಪತಿ |
ನೇಮಿಸುವ ಧರ್ಮಂಗಳಿಗೆ ತಾ
ಭೂಮಿಯೊಳಗೆ ವಿರುದ್ಧವಲ್ಲದ
ಕಾಮ ನಾನೆಂದೆಸಿಸುವೆನು ಕಲಿ ಪಾರ್ಥ ಕೇಳೆಂದ ||

ಸಪ್ತಮಾಧ್ಯಾಯಂ

ಸತ್ವರಜತಮವೆನಿಪ ಗುಣದಲಿ
ಹತ್ತಿ ತೋರ್ಪುದದಾವ ಲೋಕವು
ನಿತ್ಯನಹ ನನ್ನಿಂದಲೇ ಕೇಳವು ನಿರಂತರವು |
ಸತ್ತು ಹುಟ್ಟುವುದೆಂದು ತಿಳಿನಾ
ಹತ್ತೆನದರ ಲವೆಲ್ಲವೆನ್ನಲಿ
ಹತ್ತಿ ಮೆರೆಯುತ್ತಿಹುವು ತಾವೆಂದನು ಮುರಧ್ವಂಸಿ ||

ಹೇಳಿದೀ ಗುಣ ಮೂರರಲಿ ನೆರೆ
ಮೇಳವಿಸುವೀಮೂರುತೆರನಹ
ಕಾಳುಬುದ್ಧಿಯ ಭೇದದಿಂ ದೀಸಕಲಜನಮಿರದೆ |
ಖೂಳತನದಿಂ ಮೆರೆದು ಪರಮಕೃ
ಪಾಳು ನಿರುಪಮ ನಿತ್ಯ ನೀಶ್ವರ
ಪಾಲಕನು ನಾನೆಂದು ತಿಳಿಯದೆ ಕೆಡುತಲಿಹುದೆಂದ ||

ಎನ್ನಯೀಶ್ವರಭಾವವನು ಸಂ
ಪನ್ನವಾಗಿಯೆ ಹೊದ್ದಿಕೊಂಡಿಹ
ಭಿನ್ನತ್ರಿಗುಣಾತ್ಮಕದಿ ತೋರ್ಪೀ ಮಾಯೆ ಮನುಜರಿಗೆ |
ಮುನ್ನ ದಾಟಲು ಬಾರದಿರುತಿಹು
ದೆನ್ನ ಸೇವಕರಾರು ಕೆಲಬರು
ಧನ್ಯರುಗಳೀ ಮಾಯೆಯನು ದಾಂಟುವರು ಕೇಳೆಂದ ||

ಮೂಢರುಗಳವಿವೇಕಿಗಳು ನೆರೆ
ಗಾಢಗರ್ವಿತರುಗಳು ಮಾಯಾ
ಪೌಢಿಯಿಂ ನೆರೆ ಕೆಟ್ಟ ತತ್ವಜ್ಞಾನಬಾಹಿರರು |
ಕೂಡದೆನ್ನೊಳಗಸುರಭಾವದ
ಪಾಡನಾಶ್ರಯಿಸಿದ ನರಾಧಮ
ನಾಟಕರು ನರಕದಲಿ ಕೆಡೆವರು ಪಾರ್ಥ ಕೇಳೆಂದ ||

ನಾಕುತೆರದವರೆನ್ನ ಭಜಿಪ ವಿ
ವೇಕಿಗಳು ಸ್ವಕೃತಿಗಳದಾರೆನೆ
ಲೋಕದೊಳು ಸಂಸಾರಸಕಲವ್ಯಾಧಿಪೀಡಿತನು |
ತಾಕಿರಿದನರಿವವನು ಅರ್ಥಾ
ನೀಕವನು ಬಯಸುವನು ತತ್ವವಿ
ವೇಕವುಳ್ಳಮಹಾತ್ಮ ನಿನಿಬರು ಪಾರ್ಥ ಕೇಳೆಂದ ||

ಅವರು ನಾಲ್ವರೊಳುತ್ತಮದ ಯೋ
ಗವನು ಮಾಡುವನೊಂದೆ ಮನದಿಂ
ಕವಲುಹೊಗದ ಭಕ್ತಿ ತತ್ವಜ್ಞಾನಿಯೆಂದೆನಿಪ |
ಅವನಧಿಕನೆಂದೆನಿಪನದರಿಂ
ದವಗೆ ನಾಂಪ್ರಿಯನಹೆನೆನಗೆ ದಿಟ
ಕವೆನೆತಿಪ್ರಿಯನೆನಿಸುವನು ಕಲಿ ಪಾರ್ಥ ಕೇಳೆಂದ ||

ಸಲಲಿತವರಯೋಗಯುಕ್ತರು
ನಿಲ್ಲದೆನ್ನನೆ ಪರಮಗತಿಯೆಂ
ದೆಲ್ಲಿಯುಂ ಬಿಡದೊಂದಿ ಯೇಕೋಭಾವಯುತರಾದ |
ಎಲ್ಲರುತ್ತಮರಾದೊಡಂ
ತವ ರೆಲ್ಲರೊಳಗುಂ ಜ್ಞಾನಿ ನಾನೆಂ
ಬೆಲ್ಲಿ ಸಂಶಯವಿಲ್ಲ ಮತವಿದು ಪಾರ್ಥ ಕೇಳೆಂದ ||

ಹಲವು ಜನ್ಮಂಗಳಕಡೆಯ ನಿ
ರ್ಮಲದ ಜನ್ಮದ ಲೆನ್ನನೈದುವ
ನೊಲಿದು ತತ್ವಜ್ಞಾನಿ ಸಕಲಚರಾಚರಂಗಳನು |
ಸಲೆಗೆ ಹರಿಯಂದೇ ತಿಳಿವನಿ
ಶ್ಚಲನೆನಿಪ ವರಯೋಗಿ ಜಗದೊಳು
ಹಲವು ಮಾತೇನೈ ಸುದುರ್ಲಭನೆಂದನಸುರಾರಿ ||

ತನ್ನ ಪ್ರಕೃತಿಯಧೀನರಾಗಿಹ
ಭಿನ್ನಮಾನವರುಗಳು ಹಲವಾ
ದುನ್ನತದ ವಿಷಯಂಗಳಿಂ ಪ್ರಜ್ಞಾನವಳಿದವರು।
ಮುನ್ನಭೋಗಾಸಕ್ತಿಯಿಂ ಸಂ
ಪನ್ನನಿಯಮಂಗಳ ಪಿಡಿದುಬಳಿ
ಕನ್ಯದೇವತೆಗಳನು ಭಜಿಸುವ ರೆಂದನಸುರಾರಿ॥

ಆವನಾವನು ಭಕ್ತಿಯಿಂದಾ
ವಾವ ಮೂರ್ತಿಯ ಭೇದದಲಿ ನೆರೆ
ಭಾವದಿಂ ತಾ ಭಜಿಸಲಿಚ್ಛಯಿಸುವನು ನಿಯಮದಲಿ।
ಸೇವೆಯನು ಮಾಳ್ಪವಗೆ ನಾನದ
ನಾವ ಪರಿಯಿಂ ಚಲಿಸದೇ ಸಂ
ಭಾವಿಸುವ ಭಕ್ತಿಯನು ಕೊಡುವೆನು ಪಾರ್ಥ ಕೇಳೆಂದ॥

ಬಳಿಕ ಕೇಳಾನಿತ್ಯ ಭಕ್ತಿಯ
ಬಲುಹುವಿಡಿದಾನರನು ದೇವತೆ
ಗಳನು ತಾ ಪೂಜಿಸಲೆಳಸಿ ಪೂಜಿಸಿದ ಗುಣದಿಂದ।
ತಳುವದಾದೇವತೆಯ ರೂಪಿಂ
ತಿಳಿಯಲುತ್ತಮಕಾಮಭೋಗಂ
ಗಳನು ನಾಂ ಕೊಡಲವನು ಪಡೆವನು ಪಾರ್ಥ ಕೇಳೆಂದ॥

ಕೆಡುವುದೈ ಕೇಳಲ್ಪಮತಿಯುಲಿ
ಪಡೆದವರಫಲಸಿದ್ಧಿ ದೇವರ
ಗಡಣವನು ಭಜಿಸಿದವರಾದೇವತೆಯನೈದುವರು।
ಜಡಮತಿಗಳಂತಿರಲಿ ಯೆನ್ನನು
ಬಿಡದೆ ಭಜಿಸುವ ಭಕ್ತಿಯುಕ್ತರು
ತಡೆಯದೆನ್ನಯ ಪದವನೈದುವರೆಂದನಸುರಾರಿ॥

ಎನ್ನ ಸರ್ವೋತ್ತಮವೆನಿಪ ಸಂ
ಪನ್ನ ನಿತ್ಯ ಪರಸ್ವರೂಪವ
ಭಿನ್ನ ಮಾಯೆಯ ವಶದಲರಿಯದ ಮರುಳುಮಾನವರು |
ಸನ್ನಿಹಿತಕರಣಂಗಳಿಗೆ ತಾ
ಮುನ್ನ ಗೋಚರವಾಗದೆನ್ನನು
ಭಿನ್ನ ಮಾನವನೆಂದು ಬಗೆವರು ಪಾರ್ಥ ಕೇಳೆಂದ ||

ಸ್ಫುರಿಸಿ ತೋರುವ ಯೋಗಮಾಯಾ
ವರಣದಿಂ ದಾವರಿಸಿಕೊಂಡಿಹ
ಪರಮನಾಗಿದ್ದಾನು ತೋರೆನು ಸಕಲಮನುಜರಿಗೆ |
ಇರದವಿದ್ಯಾಶರಧಿ ಮೆರೆದಿಹ
ಮರುಳುಜಗ ವಜನವ್ಯಯಶ್ರೀ
ವರಸು ತಾನೆಂದೆನ್ನನರಿಯರು ಪಾರ್ಥ ಕೇಳೆಂದ ||

ಬಲ್ಲೆ ನಾನೀಹಿಂದೆ ಹೋದವ
ನೆಲ್ಲವನು ವರ್ತಿಸುತಲಿರ್ಪುದ
ಬಲ್ಲೆ ಮುಂದುದಯಿಸುವ ಸಚರಾಚರಸಮೂಹವನು |
ಬಲ್ಲೆನೆನ್ನನು ಪಾರ್ಥ ಕೇಳೈ
ಬಲ್ಲವನು ಜಗದೊಳಗೆತಾನತಿ
ದುರ್ಲಭನು ನಿರ್ಧರಿಸಬಲ್ಲವನಾವ ನಿಲ್ಲೆಂದ||

ಎಲೆಪರಂತಪ ಸಕಲಜಗ ತಾ
ನೆಲೆಗೆ ಸೃಷ್ಟಿಯ ಕಾಲದಲ್ಲಿಯೆ
ಬಲಿದ ರಾಗದ್ವೇಷದಿಂದವೆ ಜನಿಸಿ ತೋರುತಿಹ |
ಹೊಳೆಯುತಿಹ ವಿಷಯಂಗಳಲಿ ನೆಲ
ನೆಲಸಿದೀಸುಖದುಃಖಭ್ರಾಂತಿಯ
ಹೊಲಬನರಿಯದೆ ಭ್ರಮಿಸುತಿರುತಿಹುದೆಂದನಸುರಾರಿ ||

# ಸಪ್ತಮಾಧ್ಯಾಯಂ.

ಸಾರತರವಹ ಪುಣ್ಯಕರ್ಮದಿ
ದಾರರಾಗಿರ್ಪವರು ಕೆಲಬರು
ಘೋರತರವಹ ಪಾಪಕರ್ಮವು ನಷ್ಟವಾದವರು |
ಕ್ರೂರಸುಖದುಃಖಾದಿಬಂಧವಿ
ಕಾರದಿಂ ನಿರ್ಮುಕ್ತರಾಗಿರು
ಧೀರಸುವ್ರತ ರೆನ್ನ ಭಜಿಸುವ ರೆಂದನಸುರಾರಿ ||

ಜರೆ ಮರಣಭಯ ಹಿಂಗಲೋಸುಗ
ನರರೊಳುತ್ತಮರಾರು ಕೆಲಬರು
ಪರಮಭಕ್ತಿಯೊಳೆನ್ನ ಸಾರಿದು ಸರ್ವಭಾವದಲಿ |
ಭರದಿ ಭಜಿಸುವದವರು ನೋಡಾ
ಪರಮತತ್ವವ ನಖಿಳಕರ್ಮವ
ನಿರುತವಧ್ಯಾತ್ಮವನು ತಿಳಿವರು ಪಾರ್ಥ ಕೇಳೆಂದ ||

ಅರಿವ ರಾನಧಿಭೂತನಹೆನೆಂ
ದರಿವ ರಾನಧಿದೈವನಹೆನೆಂ
ದರಿವ ರಾನಧಿಯಜ್ಞನಹೆನೆಂದವರು ಕೆಲಕೆಲರು|
ಅರಿದು ಭಜಿಸಲು ಮರಣಕಾಲದಿ
ಮರೆಯದೆನ್ನನು ಯೋಗಬಲದಿಂ
ದುರೆ ಮನವ ಪಿಡಿದೆನ್ನ ನೈದುವರು ಪಾರ್ಥಕೇಳೆಂದ ||

ಇಂತು ವಿಜ್ಞಾನಯೋಗವೆಂಬ ಸಪ್ತಮಾಧ್ಯಾಯಂ ಸಂಪೂರ್ಣಂ

# ಅಷ್ಟಮಾಧ್ಯಾಯಂ

ಸೂಚನೆ || ಬ್ರಹ್ಮಮೊದಲಾದೇಳುಪ್ರಶ್ನೆಯ
ಮರ್ಮವನು ಕೆಲಿಪಾರ್ಥ ಕೇಳಲು
ನಿರ್ಮಳದಿ ಬೋಧಿಸಿದ ಹರಿ ಧಾರಣೆಯ ಯೋಗವನು ||

ಪರಮಪುರುಷೋತ್ತಮನೆ ಕೃಪೆಯಲಿ
ಕರುಣಿಸೈ ಪರಬೊಮ್ಮವಾವುದು
ನಿರುತದಿಂ ದಧ್ಯಾತ್ಮವಾವುದು ಕರ್ಮವೆಂತಿಹುದು |
ಪರಿವಿಡಿಯಲಧಿ ಭೂತವಾವುದು
ಹರಿಯೆ ಪೇಳಧಿದೈವವೆಂತಿಹು
ದೊರೆವುದಿದ ನೆನಗೆಂದು ಬಿನ್ನಹವಮಾಡಿದನು ಪಾರ್ಥ ||

ಮಧುರಿಪುವೆ ನೀ ಹೇಳಿದೀದೇ
ಹದೊಳು ತಾನಧಿಯಜ್ಞವೆಂಬುದು
ವಿದಿತವಾಗೆಂತಿಹುದು ಕರುಣಿಸು ಮರಣಕಾಲದಲಿ|
ಮುದದಲತಿನಿಯಮಿಸಿದ ಚಿತ್ತದ
ವಿದುಗಳಿಂ ನೀನೆನಿಸಿಕೊಂಬಾ
ಹದನನೆಲ್ಲವ ತಿಳುಹಬೇಕೆನಗೆಂದನಾಪಾರ್ಥ ||

ಪಾರ್ಥ ಕೇಳ್ಕೇಡಿಲ್ಲದಿಹ ತ
ತ್ತ್ವಾರ್ಥವೇ ಪರಬೊಮ್ಮವದು ದೇ
ಹಾರ್ಥವಾದನುಭವವು ತಾನಧ್ಯಾತ್ಮವೆನಿಸುವುದು |
ಸ್ವಾರ್ಥದಿಂ ಪ್ರಾಣಿಗಳ ಜನ್ಮದ
ಲರ್ಥಿಯಿಂ ಹೆಚ್ಚುಗೆಯ ಮಾಡುವ
ಕೀರ್ತಿತಾನುಷ್ಠಾನವದು ಸತ್ಕರ್ಮವೆನಿಸುವುದು ||

ಕೇಡನುಳ್ಳ ಪದಾರ್ಥವೇ ತಾ
ನೋಡಲಂತಧಿಭೂತವೆನಿಸುಗು
ಕೂಡೆ ಯಂತರ್ಯಾಮಿ ತಾನಧಿದೈವವೆನಿಸುವನು |
ನಾಡ ಮಾತೇ ನೀತನುವಿನಲಿ
ಕೇಡನುಳಿದಧಿಯಜ್ಞವಾಗಿಹೆ
ಗಾಢದೇಹವ ಧರಿಸಿದರೊಳುತ್ತಮನೆ ಕೇಳೆಂದ ||

ಆವನೊಬ್ಬನು ಮರಣಕಾಲದೊ
ಳಾವಪರಿಯಿಂ ದೆನ್ನ ನೆರೆ ತಾ
ಭಾವಿಸುತ ದೇಹವನು ಬಿಟ್ಟು ಪರೇತನೆನಿಸುವನು ||
ಭೂವಲಯದೊಳ ಗಾತನೆನ್ನಯ
ಪಾವನದ ಸಾಯುಜ್ಯವನು ಸ
ದ್ಭಾವದಿಂ ಪಡೆವಲ್ಲಿ ಸಂಶಯವಿಲ್ಲಕೇಳೆಂಡ ||

ಮರಣಕಾಲದಲಾವುದನು ಸಂ
ಸ್ಮರಿಸುತಲಿ ನರರೀಶರೀರವ
ನಿರುತದಿಂ ಪರಿಹರಿಸುತಿಹರಾವಸ್ತುರೂಪವನು |
ಭರದಲೈದುವರೆಂತೆನಲು ತಾ
ವಿರದೆ ವಸ್ತುವ ನೆನೆದ ಕತದಿಂ
ಪರಮತತ್ವವ ನೆನೆವುದದರಿಂ ಪಾರ್ಥ ಕೇಳೆಂದ ||

ಆದುನಿಮಿತ್ತನವರತವೆನ್ನನು
ಹದುಳದಿಂ ನೆನೆ ನಿನ್ನಧರ್ಮದ
ಕದನವನು ನೆರೆಮಾಡು ಮನಬುದ್ಧಿಗಳನೆನ್ನಲ್ಲಿ|
ವಿದಿತದಿಂ ದರ್ಪಿಸಲಿಕೆನ್ನನು
ಮುದದಲೈದುವೆ ಪರಮಸುಖದಿಂ
ದಿದಕೆ ಸಂಶಯವಿಲ್ಲ ಕೇಳೆಂದನು ಮುರಧ್ವಂಸಿ

ಹೊಲಬುಗೆಡದಭ್ಯಾಸಯೋಗದಿ
ಕೆಲಬಲಕೆ ಹರಿಯದ ಸುಚಿತ್ತದಿ
ನಲಿದು ಪುರುಷೋತ್ತಮನ ಪದವನು ನೆನೆಯುತಿಹ ಯೋಗಿ |
ನಲವಿನಿಂ ದಾಪರಮಪುರುಷನ
ನೆಲೆಯನರಿ ದಾತನಪದವನತಿ
ಸುಲಭದಿಂ ದೈದುವನು ನಿಜವಿದು ಪಾರ್ಥ ಕೇಳೆಂದ ||

ಆವನತಿಸರ್ವಜ್ಞ ಶಾಶ್ವತ
ಪಾವನನು ಸರ್ವಕೆ ನಿಯಾಮಕ
ಭಾವರಹಿತನಚಿಂತ್ಯ ಸೂರಿಯಕೋಟಿಸನ್ನಿಭನು |
ಜೀವ ತಾಮಸಗುಣವಿದೂರನು
ದೇವನಣುವಿಂಗಣು ಜಗಕೆ ಸ
ದ್ಭಾವಕರ್ತನು ಪರಮನೆಂದೀಪರಿ ನೆನೆವುದೆಂದ ||

ಮರಣಕಾಲದಲೆನ್ನ ಭಕ್ತಿಯ
ಧರಿಸಿ ನಿಶ್ಚಲಮನದಿ ಯೋಗದ
ಭರದಿ ಚಲಿಸುವ ಪ್ರಾಣನನು ಭ್ರೂಮಧ್ಯದಲಿ ನಿಲಿಸಿ |
ಧರಿಸಿ ಪರಮಾತ್ಮನನು ಮನಸಂ
ಚರಿಸದಂತಿರೆ ನೆನೆವ ಪುರುಷನು
ನಿರುತದಿಂ ಪರಮಾತು ಮನನೈದುವನು ಕೇಳೆಂದ ||

ವೇದವಾದಿಗಳಾವುದೊಂದನ
ನಾದಿಯಕ್ಷರವೆಂದು ಪೇಳ್ವರು
ಹೋದ ರಾಗವನುಳ್ಳಯತಿಗಳು ಹೋಗುವರಾವುದನು |
ಮೇದಿನಿಯೊಳಾವುದನು ಸಾಧಿಸ
ಲಾದರಿಸುವರು ಬ್ರಹ್ಮಚರಿಯವ
ಬೋಧಿಸುವೆನಾಪದವ ಸಂಕ್ಷೇಪದಲಿ ನಿನಗೆಂದ ||

# ಅಷ್ಟಮಾಧ್ಯಾಯಂ

ಇಂದ್ರಿಯಂಗಳ ನಿಲಿಸಿ ಮನವನು
ತಂದು ಹೃದಯಾಕಾಶದಲಿ ಬಲು
ಹಿಂದಿರಿಸಿ ಯೋಗದಲಿ ತನ್ನಯ ಪ್ರಾಣವಾಯುವನು |
ಸಂದ ಮೂರ್ಧದೊಳಿರಿಸಿ ಧಾರಣೆ
ಯೆಂದೆನಿಪ ಯೋಗವನು ಮಾಡಲು
ಕುಂದದಾನಂದವನು ಪಡೆವನು ಪಾರ್ಥ ಕೇಳೆಂದ ||

ಪ್ರಣವದೊಂದಕ್ಷರದಿ ವೇದ್ಯವ
ನೆಣಿಸಿ ಜಪಿಸುತಲೆನ್ನ ನಿಜವನು
ಪ್ರಣವದರ್ಥವಿಚಾರದಿಂ ದನವರತ ಭಾವಿಸುತ |
ತೃಣದವೋಲ್ದೇಹವನು ಬಿಟ್ಟಾ
ಕ್ಷಣದೊಳಾಪರಬೊಮ್ಮವನು ವೆಂ
ದಣಿಸುವನು ಕಲಿಪಾರ್ಥ ಕೇಳೆಂದನು ಮುರಧ್ವಂಸಿ ||

ಎಲೆಧನಂಜಯ ಆವನೊಬ್ಬನು
ಚಲಿಸದಿರ್ಪೇಕಾಗ್ರಚಿತ್ತದಿ
ನೆಲೆಗೆ ತಾನನವರತ ನೆನೆಯುತ್ತಿಹನು ಮತ್ಪದವ |
ಫಲವ ಬಯಸದೆ ನಿತ್ಯದೊಳು ನಿ
ರ್ಮಲನೆನಿಸುವಾಯುಕ್ತಯೋಗಿಗೆ
ಸುಲಭ ನಾನಾಗಿಹೆ ನಿಧಾನವಿದೆಂದನಸುರಾರಿ ||

ಪರಮಯೋಗಿಗಳೆನ್ನನೈದಿದ
ಹಿರಿಯ ರುತ್ತಮಪದದಲಿರುವರು
ಮರಳಿ ದುಃಖಾಲಯ ವನಿತ್ಯವೆನಿಪ್ಪ ಜನ್ಮದಲಿ |
ತಿರುಗರನುಪಮ ನಿತ್ಯನಿರ್ಮಳ
ತುರಿಯಪರಮಾನಂದಸುಖಸಾ
ಗರದೊಳಿರುತಿಹರೆನ್ನ ಭಜಿಸುವ ರೆಂದನಸುರಾರಿ ||

ಫಲುಗುಣನೆ ಕಮಲಜನು ಮೊದಲಾ
ಗುಳಿದ ಲೋಕಂಗಳನು ಪಡೆದವ
ರಿಳಿಗೆ ಪುನರಪಿ ಮರಳುವರು ಫಲದಾಸೆಯುಳ್ಳವರು |
ನೆಲೆಯು ಕೇಳ್ಕೈ ಯೆನ್ನನೈದಿದ
ಸುಲಭಭಕುತಗಳಿಗೆ ಮರಳಿ ಜನ್ಮದ
ಹೊಲಬು ತಾ ದಿಟಕಿಲ್ಲವೆಂದನು ದಾನವಧ್ವಂಸಿ ||

ಆರು ಕೆಲಬರು ಚತುರಯುಗವದು
ಸಾರತರದಿಂದೊಮ್ಮೆ ಸಾಸಿರ
ಬಾರಿ ತಿರುಗಲು ಕಮಲಜನ ಹಗಲಾಪರಿಯ ರಾತ್ರಿ |
ವೀರ ಕೇಳೀಪರಿಯ ಕಾಲದ
ಕಾರಿಯವ ನೆರೆ ಬಲ್ಲ ಹಿರಿಯರ
ಪಾರದಿವರಾತ್ರಿಗಳ ಬಲ್ಲವರೆನಿಪರನವರೆಂದ ||

ಮೊದಲಲಿಲ್ಲದ ಸುರನರಾದಿಗ
ಳುದಿಸುವರು ಕಮಲಜನ ದಿವಸವು
ಮೊದಲುಗೊಳಲು ಜಗಂಗಳಾಗವ್ಯಕ್ತತತ್ವದಲಿ |
ಅದುಭುತದ ಗುಣರಾತ್ರಿ ತಾ ಮುಂ
ದೊದಗುತಿರ ಲಾಸಕಲಸುರನರ
ಸದನಸಹಿತಡಗುವುದು ಕೇಳವ್ಯಕ್ತದೊಳು ಮರಳಿ ||

ಈಪರಿಯಲುದಯಿಸಿದ ಪ್ರಾಣಿಗ
ಳಾಪಿತಾಮಹನಿರುಳು ಸಲುವುದು
ಪಾಪಪುಣ್ಯದಮಿಶ್ರದಿಂದವೆ ಕಮಲಜನ ಹಗಲು |
ರೂಪುವಿಡಿದುದಯಿಸಿಯುಳಿದು ಮರ
ಳೀಪರಿಯಲೇ ಜನನಮರಣಕ
ಲಾಪದಿಂ ತಿರುಗುತ್ತಿಹುದು ಕಲಿಪಾರ್ಥ ಕೇಳೆಂದ ||

## ಅಷ್ಟಮಾಧ್ಯಾಯಂ

ವರ ಕಮಲಜನ ರಾತ್ರಿಯೆನಿಸುವ
ನಿರುತವೆನಿಪವ್ಯಕ್ತದಿಂದವೆ
ಪರವನಾತನ ವನ್ಯವೆನಿಸುವುದಾವುದಾನೊಂದು |
ಪರಮವಮಲಾವ್ಯಕ್ತಚಿನುಮಯ
ಸ್ಥಿರವೆನಿಪ ಪರಬೊಮ್ಮವೀಜಗ
ಕರಗಿ ನೆರೆ ಕೆಟ್ಟಡೆಯು ಕೆಡದಿಹುದೆಂದನಸುರಾರಿ ||

ಅಡಿಗಡಿಗೆ ಕೆಡದಾತ್ಮನಿಂದ್ರಿಯ
ಗಡಣಚರಿಸದ ಕತದಿ ಶ್ರುತಿಗಳ
ಗಡಣದಿಂದವ್ಯಕ್ತವೆನಿಸುವು ದಾವುದಾನೊಂದು |
ಬಿಡದೆ ಪರಗತಿಯೆಂದು ಪೇಳ್ವರು
ತಡೆಯದಾವುದನೈದಿ ತಿರುಗರು
ದೃಢವೆನಿಪ ನಿಜಪದವದೆಂದನು ಪಾರ್ಥಗಸುರಾರಿ ||

ಜಾಣ ಕುಂತೀಸುತ ಸಮಸ್ತ
ಪ್ರಾಣಿಗಳು ನೋಡಾವನೊಬ್ಬನ
ಕೇಣದಿಂ ದಿಹುವಾವನಿಂ ದೀಜಗವು ನಿರ್ಮಿತವು |
ಮಾಣದಾಪರಮಾತ್ಮಗನ್ಯವ
ಕಾಣದಿಹ ವರಭಕ್ತಿಯೋಗದ
ಜಾಣನೇ ನಿಜಪದವನೈದುವ ನೆಂದನಸುರಾರಿ ||

ವರ ಭರತಕುಲತಿಲಕ ಪಾವನ
ತರರೆನಿಪ ಯೋಗಿಗಳು ಕಡೆಯಲಿ
ಸರಿರವನು ಬಿಡಲಾವಕಾಲದ ವೈಭವಂಗಳಲಿ |
ಮರಳಿ ತಿರುಗರು ತಿರುಗಿ ಬಹರಾ
ಯೆರಡು ಕಾಲವ ನಿನಗೆ ನಾ ವಿ
ಸ್ತರಿಸುವೆನು ಕೇಳೆಂದನಾ ಮುರವೈರಿ ಕರುಣದಲಿ ||

ಜಗದೊಳಗ್ನಿ ಜ್ಯೋತಿಯುದರಿಂ
ಹಗಲು ಬೆಳಗುವ ಶುಕ್ಲಪಕ್ಷದ
ಬಗೆಯಲೊಗೆದಭಿಮಾನದೇವರು ಮಕರ ಮೊದಲಾದ |
ವಿಗಡ ಷಣ್ಮಾಸಂಗಳಿವುತಾ
ಮಿಗಿಲೆನಿಸುತಿಹು ವುತ್ತರಾಯಣ
ಸುಗತಿಯುದರಲ್ಲಳಿಯೆ ಮುಕ್ತರು ಬ್ರಹ್ಮವಿದರೆಂದ ||

ಧೂಮ ರಾತ್ರಿಯು ಕೃಷ್ಣಪಕ್ಷ
ಸ್ತೋಮ ಕರ್ಕಾಟಕವು ಮೊದಲಾ
ದಾಮಹಾ ಷಣ್ಮಾಸದೇವರು ದಕ್ಷಿಣಾಯನವು |
ಸೋಮಲೋಕದ ಮಾರ್ಗದಲ್ಲಿ ವಿ
ರಾಮದಿಂ ಗತರಾದವರು ತ
ತ್ಸೋಮಲೋಕವನೈದಿ ಮರಳುವ ರೆಂದನಸುರಾರಿ ||

ಈ ತೆರದಲಿಹ ಶುಕ್ಲಕೃಷ್ಣ
ಖ್ಯಾತಿವಿಡಿದೀವುಭಯಮಾರ್ಗದ
ನೀ ತಿಳಿದು ನೋಡೀಜಗಕೆ ಶಾಶ್ವತವೆನಿಸುತಿಹುದು |
ನೀತಿಯಿಂ ಕೇಳುತ್ತರಾಯಣ
ದಾತ ಮರಳನು ದಕ್ಷಿಣಾಯನ
ಧಾತ ನೀಭೂತಳಕೆ ಮರಳುವ ನೆಂದನಸುರಾರಿ ||

ಈವುಭಯಗತಿಗಳನು ನೆರೆ ತಾ
ನಾವ ಪರಿಯಿಂ ತಿಳಿದ ಕತದಿಂ
ದಾವಯೋಗಿಯು ಮುಂದುಗೆಡ ಸಂಸಾರದಪಟಲಕೆ
ಭೂವರನೆ ಕೇಳದು ನಿಮಿತ್ತವು
ತೀವಿದೆಲ್ಲಾ ಕಾಲದಲಿ ಚಿ
ದ್ಭಾವದಿಂ ವರಯೋಗಿ ನೀನಾಗೆಂದನಸುರಾರಿ ||

## ಅಷ್ಠಮಾಧ್ಯಾಯಂ

ಶ್ರುತಿಗಳಲಿ ಯಜ್ಞಂಗಳಲಿ ಸು
ವ್ರತತಪೋದಾನಂಗಳಲಿ ನಿ
ಶ್ಚಿತ ವಿಹಿತದಿಂ ದಾವಪುಣ್ಯವು ಫಲಿಸುತಿಹುದದನು |
ಅತಿಗಳೆವನೆಲ್ಲವನು ನಿಜದು
ಸ್ಥಿತಿಯನರಿದಾಯೋಗಿ ನಿರ್ಗುಣ
ಗತಿಯೆನಿಪ ಪರತತ್ವಪದವನು ಪಡೆವನವನೆಂದ ||

— ಇಂತು ಧಾರಣಾಯೋಗವೆಂಬ ಅಷ್ಟಮಾಧ್ಯಾಯಂ ಸಂಪೂರ್ಣಂ —

# ನವಮಾಧ್ಯಾಯಂ

ಸೂಚನೆ || ರಾಜಯೋಗವ ವಿವರಿಸಿದ ಯದು
ರಾಜವಂಶದೊಳುತ್ತಮನು ಸುರ
ರಾಜತನಯುಂಗೊಲವಿನಿಂ ಧೃತರಾಷ್ಟ್ರಕೇಳೆಂದ ||

ಆವುದೊಂದನು ತಿಳಿಯೆ ಭವದುಃ
ಖಾವಳಿಯ ಬಂಧನದದೆಸೆಯಿಂ
ದಾವಿಮೋಕ್ಷವ ಪಡೆವೆ ನೀನತಿಗೋಪ್ಯವಾಗಿರ್ಪ |
ಈವಿಮಲವಿದ್ಯೆಯನಸೂಯಾ
ಭಾವಿ ನಿನಗಿಲ್ಲಾಗಿ ಶಾಸ್ತ್ರಗು
ಣಾವಲಂಬನದಿಂದ ಉಸುರುವೆನೆಂದನೆಸುರಾರಿ ||

ಪಾವನವಿದತಿಗೋಪ್ಯ ವರವಿ
ದ್ಯಾವಳಿಯೊಳುತ್ತಮವು ಧರ್ಮವ
ನೋವಿಕೊಡುವುದು ಮಾಡಲಿಕೆ ಸುಖಸಾಧ್ಯವೆನಿಸುವುದು |
ಜೀವರಿಗೆ ಪ್ರತ್ಯಕ್ಷಗಮ್ಯವು
ತಾ ವಿಮಳವಕ್ಷಯವೆನಿಪ
ಚಿದ್ಭಾವಸಾಧನ ರಾಜವಿದ್ಯವು ಪಾರ್ಥ ಕೇಳೆಂದ ||

ಅರಿಭಯಂಕರ ಈ ಸುಧರ್ಮದ
ವರರಹಸ್ಯವ ನಂಬಲರಿಯದ
ನರಪಶುಗಳೆನ್ನಯ ಪದವನೈದದೆ ಮರಳಿ ಜನಿಸಿ |
ಮರಳಿ ಜನ್ಮವನುಳ್ಳ ಭವಸಾ
ಗರದಪಥದಲಿ ತಿರುಗುತಿಹರಿದು
ನಿರುತವೆಂದರ್ಜುನನ ಬೋಧಿಸಿದನು ಮುರಧ್ವಂಸಿ ||

## ನವಮಾಧ್ಯಾಯಂ.

ಅರಿಯಬಾರದ ಸೂಕ್ಷ್ಮರೂಪಿಂ
ಮೆರೆಯುತಿರ್ಪೆನ್ನಿಂದಖಿಳಜಗ
ತುರುಗಿ ನಿರ್ಮಿತವಾಗಿರುವುದೆನ್ನೊಳು ಚರಾಚರವು |
ನಿರುಗೆಯಿಂದಿರುತಿಹುದು ಕೇಳಾ
ಮೆರೆವ ಜಗದೊಳಗಾನು ಸಿಲುಕೆನು
ಮರೆಯಬೇಡೈ ಪಾರ್ಥ ನೀನಿದನೆಂದನಸುರಾರಿ ||

ಎನ್ನಲೀಭೂತಂಗಳಿರವಿದು
ಮುನ್ನ ದಿಟಕಿಲ್ಲಾಗಿ ಕೇಳೈ
ಯೆನ್ನ ಯೋಗೈಶ್ವರ್ಯವೇ ಧರಿಸಿಹುದಖಿಲಜಗವ |
ಎನ್ನಯೋಗೈಶ್ವರ್ಯರೂಪವು |
ಭಿನ್ನರೂಪವ ಸೃಜಿಸುವದರಲಿ
ಸನ್ನಿಹಿತವಾಗಿರದು ಜಗವದು ಪಾರ್ಥ ಕೇಳೆಂದ ||

ಗಗನದೊಳು ಹೊದ್ದದಲೆ ತಾನದ
ರಗಲದಲಿ ತುಂಬಿರ್ದದೆತ್ತಲು
ಮಿಗುವ ವಾಯುವದೆಂತು ನೋಡಾತೆರದೊಳೀಜಗವು |
ಬಗೆಯಲೆನ್ನಸು ಹೊದ್ದದೆನ್ನಲಿ
ಮಿಗೆ ಮೆರೆಯುತಿರ್ದಪುದು ಮಾಯಾ
ತ್ರಿಗುಣಕಾರ್ಯವಿದೆಂದು ನೀ ತಿಳಿಯೆಂದನಸುರಾರಿ ||

ಕಮಲಜನ ಕಲ್ಪಾಂತದಲಿ ತ
ತ್ಕ್ರಮದ ಸಚರಾಚರವಿದೆನ್ನಯ
ವಿಮಳಮಾಯೆಯೊಳಳಿದಿರಲು ಮರಳಿಯು ಕಮಲಭವನಾ |
ಸಮನಿಸದೆ ಕಲ್ಪಾದಿಯೊಳಹಂ
ಮಮವಿಡಿದ ಸಚರಾಚರಂಗಳ
ನಿಮಿಷದಲಿ ನಿರ್ಮಿಸುತಲಿಹೆನಾ ಸೆಂದನಸುರಾರಿ ||

ಪ್ರಕೃತಿವಶಥ ಸ್ವತಂತ್ರವಲ್ಲದ
ಸಕಲಭೂತಗ್ರಾಮವನು ತಾ
ನಖಿಲಕಲ್ಪಾದಿಯಲಿ ಯೆನ್ನೆಯಧೀನವಾಗಿದ್ದ
ಪ್ರಕೃತಿಯನು ಮಿಗೆ ಕೂಡಿ ಸೃಜಿಸುವೆ
ಸಕಲಲೋಕವ ಮರಳಿ ನಾಂ ತ
ತ್ಪ್ರಕೃತಿವಶವಾಗಿರೆನು ಕೇಳೆಂದನು ಮುರಧ್ವಂಸಿ ||

ಎಲೆಧನಂಜಯ ಈಜಗಂಗಳ
ನೊಲಿದು ಸೃಷ್ಟಿಸಿ ಲಯವ ಮಾಡುವ
ಹಲವು ಕರ್ಮಗಳೆನ್ನ ನಿರ್ಬಂಧಿಸವದೇಕೆನಲು |
ಫಲವ ಬಯಸೆನು ಸಕಲಕರ್ಮದ
ಹೊಲಬಿನೊ ಳುದಾಸೀನರೆನಿಸಿದ
ಬಲುಮುನಿಗಳಂದದಲಿ ನಾನಿಹ ಕತಕ್ಕಿ ಕೇಳೆಂದ ||

ಎನ್ನಧಿಷ್ಠಾನದ ಬಲುಪಿನಿಂ
ಸನ್ನಿಹಿತವಹ ಮಾಯೆ ಸ್ಥಾವರ
ದುನ್ನತದ ಜಂಗಮಜಗತ್ತುಗಳನು ಸೃಜಿಸುತಿಹುದು |
ಎನ್ನನರಿಯದವಿದ್ಯೆಯೆಂಬಾ
ಭಿನ್ನಕಾರಣದಿಂದ ಲೀಜಗ
ವೆುನ್ನ ಸಂಸಾರದಲಿ ತೊಟ್ಟನೆ ತೊಳಲುತಿಹುದೆಂದ ||

ಯಜ್ಞದಧಿಪತಿ ನಿಖಿಲಭೂತ ಗು
ಣಜ್ಞನೆನಿಪ ಮಹೇಶ್ವರನು ಸ
ರ್ವಜ್ಞನಾನೆಂದೆನ್ನ ನಿಜಭಾವವ ನರಿಯದವರು |
ಅಜ್ಞರುಗ ಳೀಮನುಜದೇಹವ
ನಜ್ಞತನದಿಂ ಧರಿಸಿದೆನ್ನನ
ವಜ್ಞೆಯನು ಮಾಡುವರು ಮಾನವರೆಂದನಸುರಾರಿ ||

## ನವಮಾಧ್ಯಾಯಂ.

ಅಸುರರಾಕ್ಷಸಜನವ ಹೊದ್ದಿಹ
ಹೊಸಪರಿಯ ಮೋಹವನು ನೆರೆ ಪು
ಟ್ಟಿಸುವ ಪ್ರಕೃತಿಯ ಕೂಡಿಕೊಂಡಿಹ ಮೂಢಮಾನವರು |
ಶಿಶುಗಳಂದದಿ ಫಲರಹಿತವಹ
ಹುಸಿಯ ಬಯಕೆ ನಿಷಿದ್ಧಕರ್ಮವು
ವಿಷಯಮೋಹಜ್ಞಾನವುಳ್ಳವ ರೆಂದನಸುರಾರಿ ||

ದೇವತಾಸಂಬಂಧಿಯಾಗಿ
ರ್ಪೀವಿಮಲ ಪ್ರಕೃತಿಯನು ಹೊದ್ದಿದ
ಭಾವಶುದ್ಧಮಹಾತ್ಮರೆನ್ನ ನನನ್ಯಭಾವದಲಿ |
ದೇವನಾನಜ ನವ್ಯಯನು ಭೂ
ತಾವಳಿಗೆ ನಾನಾದಿಕಾರಣ
ಪಾವನೋತ್ತಮ ನೆಂದರಿದು ಭಜಿಸುವರು ಕೇಳೆಂದ ||

ಅನವರತ ಕೀರ್ತಿಸುವರೆನ್ನನೆ
ಅನವಧಿಕ ನಿಯಮ ವ್ರತಂಗಳ
ಲನವರತ ಯಜಿಸುವರು ನಿರ್ಮಲ ಮನದ ಭಕ್ತಿಯಲಿ |
ಅನವರತ ವಂದಿಸುವರೆನ್ನನು
ವಿನುತಯೋಗಾಭ್ಯಾಸಿಗಳು ತನು
ಮನಧನವ ನರ್ಪಿಸುತಿಹರು ಕಲಿ ಪಾರ್ಥ ಕೇಳೆಂದ ||

ಮತ್ತೆ ಕೆಲಬರು ತತ್ವನಿಷ್ಠರು
ಉತ್ತಮೋತ್ತಮಜ್ಞಾನಯಜ್ಞದಿ
ನಿತ್ಯನೆನ್ನನು ಧ್ಯಾನಿಸುತ ಭಜಿಸುವರು ಭಕ್ತಿಯಲಿ |
ಚಿತ್ತದೇಕೀಭಾವದಿಂ ಪುರು
ಷೋತ್ತಮನು ನಾನೆಂಬಭೇದವ
ಹತ್ತಿ ಹಲವಂದದಲಿ ಯಜಿಪರು ಪಾರ್ಥ ಕೇಳೆಂದ ||

ನಾನಖಿಳಕ್ರತು ಯಜ್ಞಪಂಚಕ
ನಾನೆ ತಾಂ ಸ್ವಾಹಾಸ್ವಧಾತ್ಮಕ
ನಾನೆ ಸಕಲೌಷಧಿವನಸ್ಪತಿ ಮಂತ್ರಚಯ ನಾನೆ |
ನಾನೆ ಘೃತ ಪಾವಕನು ಜೇಳುವೆ
ನಾನೆ ಲೋಕದೊಳಲ್ಲದೆನ್ನಿಂ
ದೇನು ಬೇರೊಂದಿಲ್ಲ ವೈ ಕಲಿ ಪಾರ್ಥ ಕೇಳೆಂದ ||

ವರಪಿತಾಮಹ ಮಾತೃಪಿತೃಗಳು
ಹೊರೆವೊಡೆಯ ನೀಜಗಕೆ ಕೇಳೈ
ಪರಮಪಾವನ ನರಿಯಬೇಡಿದ ತತ್ವವದು ನಾನು |
ಪರತರ ಪ್ರಣವಾತ್ಮ ವೇದದೊ
ಳುರುತರದ ಋಕ್ಸಾಮಯಜು ವಿ
ಸ್ತರಮಯನು ನಾನಲ್ಲದಿರುತಿಹ ವಸ್ತುವಿಲ್ಲೆಂದ ||

ಗತಿ ಜಗಕೆ ಪುರುಷಾರ್ಥದಾಯಕ
ಪತಿ ಹೊರೆವ ರಕ್ಷಕನು ಸಾಕ್ಷಿ
ಸ್ಥಿತಿಗೆ ನೆಲೆವನೆ ಬಂಧು ಜನನಸ್ಥಾನವೆಲ್ಲಕ್ಕೆ |
ಮೃತಿಗೆ ಪ್ರಳಯಸ್ಥಾನ ಲೋಕಕೆ
ಶ್ರುತಿವಿಹಿತದಿಂದಾದಿಕಾರಣ
ನುತ ಪರಾಕ್ರಮಿ ಕೇಡನೈದದಬೀಜ ನಾನೆಂದ ||

ಸೂರಿಯನ ರೂಪಿನಲಿ ತಪಿಸುತ
ನೀರಸವ ಮಾಡುವೆನು ಮಳೆಯನು
ಭಾರದಂತಿರೆ ತಡೆದು ಕರೆವೆನು ಮೇಘರೂಪದಲಿ |
ಚಾರು ಮೋಕ್ಷವು ಮೃತ್ಯುನಾನು ವಿ
ಚಾರಿಸಲು ಚಿದ್ರೂಪು ಸತ್ತು ವಿ
ಕಾರವಿಲ್ಲದ ವಸ್ತು ನಾನೆಲೆ ಪಾರ್ಥ ಕೇಳೆಂದ ||

ಶ್ರುತಿಗಳನುಮತಿಯುಳ್ಳವರು ದೀ
ಕ್ಷಿತರು ಸಗ್ಗವ ಬಯಸಿ ನಾನಾ
ಕ್ರತುಗಳಿಂದವೆ ಯಜಿಸಿ ನೆರೆ ನಿಷ್ಪಾಪರಾದವರು |
ಕ್ರತುಫಲದಿ ದೇವೇಂದ್ರಲೋಕ
ಸ್ಥಿತಿಯ ಪಡೆದಾದೇವತೆಗಳು
ಸ್ನತದ ಭೋಗಂಗಳನು ಭೋಗಿಸುತಿಹರು ಕೇಳೆಂದ ||

ಆವರು ಸ್ವರ್ಗದ ಸುಖಕರದ ಭೋ
ಗವನು ಭೋಗಿಸಿ ಪುಣ್ಯತೀರಲಿ
ಕವರು ನಿಜದಿಂ ಮರ್ತ್ಯಲೋಕವೆ ಹೊಗುವರೀತೆರದಿ |
ವಿವಿಧವೇದದ ಧರ್ಮವನು ಮಾ
ಡುವ ವಿಷಯಕಾಮುಕರು ಧರಣಿಗೆ
ದಿವಕೆ ಬಿಡದೆಡೆಯಾಡುವರು ಕಲಿ ಪಾರ್ಥ ಕೇಳೆಂದ ||

ಆರು ಕೆಲಬರು ನನ್ನನೇ ನೆರೆ
ಸಾರಿ ಮತ್ತೇನುವನು ಬಯಸದ
ಧೀರರುಗಳೆನ್ನನು ಯಜಿಪರಾನಿತ್ಯಯುಕ್ತರಿಗೆ |
ಸಾರತರಪರಲೋಕಲಾಭ ದು
ದಾರದಿಹಲೋಕದ ಸುಖಂಗಳ
ಸೇರುವೆಯು ರಕ್ಷೆಯನು ತಾ ವಹಿಸುವೆನು ಕೇಳೆಂದ ||

ಅನ್ಯದೇವರ ಭಕ್ತರಾಗಿಯೆ
ಸನ್ನಿಹಿತವಿಶ್ವಾಸದಿಂ ಸಂ
ಪನ್ನಭಕ್ತಿಯೊಳಾರು ಕೆಲಬರು ಯುಜಿಸುತಿಹರವರು |
ಎನ್ನನೇ ಶ್ರುತಿವಿಹಿತವಿಧಿಯಲಿ
ಮನ್ನಿಸದೆ ಯಜಿಸುವರವರಿಗಾ
ಧನ್ಯಗತಿ ಬೇಗದಲಿ ದೊರಕದು ಪಾರ್ಥ ಕೇಳೆಂದ ||

ಸರ್ವಯಜ್ಞಂಗಳನು ಭೋಗಿಪ
ಸರ್ವಕಧಿಪತಿಯೆನಿಸಿದೆನ್ನನು
ಸರ್ವಥಾ ಪರತತ್ವವೆಂದುರೆ ಯರಿಯದುದರಿಂದ |
ಸರ್ವದೇವತೆಗಳನು ಯಜಿಸುವ
ಗರ್ವಿತರು ತತ್ವದಲಿ ವಿಮುಖರು
ಸ್ವರ್ಗದೇಹಂಗಳೊಳು ತಿರುಗುವರೆಂದನಸುರಾರಿ ||

ಕ್ರತುಗಳಿಂದಿಂದ್ರಪ್ರಮುಖದೇ
ವತೆಗಳನು ಯಜಿಸಿದವರಾಸುರ
ಪತಿಯ ಲೋಕವನೈದುವರು ಪಿತೃಭಕ್ತರವರುಗಳ |
ಗತಿಯು ಪಡೆವರು ಭೂತನಿಚಯ
ವ್ರತರು ನಡೆವರು ಭೂತಲೋಕಕೆ
ಶ್ರುತಿವಿಹಿತದಿಂ ದೆನ್ನ ಭಜಿಸುವ ರೆನ್ನನೈದುವರು ||

ನೆವನೊಬ್ಬನು ಭಕ್ತಿಯಿಂದಲೆ
ಪಾವನೋತ್ತಮ ಪತ್ರಪುಷ್ಪ ಫ
ಲಾವಳಿಯನುದಕವನು ತಾನೆನಗರ್ಪಿಸುತಲಿಹನು |
ಭಾವಶುದ್ಧಾಂತಃಕರಣನಹ
ಜೀವನಿಂದರ್ಪಿಸಿದ ಪುಷ್ಪಫ
ಳಾವಳಿಯ ಭೋಗಿಸುವೆನೈ ಕಲಿ ಪಾರ್ಥ ಕೇಳೆಂದ ||

ಆವ ಕೆಲಸವ ಮಾಳ್ಪೆನೀ ಮ
ತ್ತಾವುದನು ಭುಂಜಿಸುವೆ ಯಗ್ನಿಯೊ
ಳಾವುದನು ಬೇಳುವೆ ಕೊಡುವೆ ನೀನಾವ ದಾನವನು |
ಆವ ತಪವನು ಮಾಳ್ಪೆ ಕುಂತೀ
ದೇವಿಯಾತ್ಮಜ ಕೇಳದೆಲ್ಲವ
ಭಾವಶುದ್ಧಿಯೊಳೆನಗೆ ನೀನು ಸಮರ್ಪಿಸುವುದೆಂದ ||

ಈ ತೆರನ ನೀ ಮಾಡುವೊಡೆ ವಿ
ಖ್ಯಾತವಹ ಸನ್ಯಾಸಯೋಗದ
ರೀತಿವಿಡಿದಿರ್ದೀಶುಭಾಶುಭಫಲವ ಕೊಡುತಲಿಹ |
ಜಾತಿವಿಧಿಯುಹ ಕರ್ಮಬಂಧನ
ಜಾತದಿಂ ಬಿಡುಗಡೆವಡೆದು ಬಳಿ
ಕಾತತುಕ್ಷಣಮೆನ್ನ ಪದವನು ಪಡೆವೆ ಕೇಳೆಂದ ||

ನಾನಖಿಲಭೂತಂಗಳಲಿ ಸಮ
ಹೀನ ಹಗೆ ಕೆಳೆ ಯಿಲ್ಲೆನಗೆ ಕೇಳ್
ಜ್ಞಾನಭಕ್ತಿಯೊಳಾರು ಕೆಲಬರನನ್ಯಭಾವದಲಿ |
ಸ್ವಾನುಭವದಿಂ ದೆನ್ನ ನೆಂದುಂ
ಜಾನಿಸುವರವ ರೆನ್ನೊಳಿರುತಿಹ
ರಾನವರ ಹೃದಯದಲಿ ನೆಲಸಿಹೆನೆಂದನಸುರಾರಿ ||

ಅತಿದುರಾಚಾರದಿ ನಡೆಯುತಿಹ
ಪತಿತ ಮೊದಲಾಗನ್ಯದೈವವ
ಮತಿಯೊಳಾರಾಧಿಸದೆ ಯೆನ್ನನು ಪೂಜಿಸುತಲಿಹನು |
ಕ್ಷಿತಿಯೊಳುತ್ತಮವಾದ ತನ್ನಯ
ಗತಿಯನುಳ್ಳವನಾಗಿ ಬುಧರಿಂ
ಪತಿಸುಕೃತಿಯೆಂದೆನಿಸಿಕೊಂಬನು ಪಾರ್ಥ ಕೇಳೆಂದ ||

ಆತನತಿವೇಗದಲಿ ಧರ್ಮದ
ನೀತಿವಿದನಹ ನಡಿಗಡಿಗೆ ಪರಿ
ಪೂತಶಾಂತಿಯನೈದುವನು ಕೆಡ ನೆನ್ನ ನಿಜಭಕ್ತ |
ಈತೆರನ ನೀನರಿದು ನಂಬು ಮ
ಹಾತಪಸ್ವಿನ ಫಲವಿದಲ್ಲದೆ
ಮಾತುಮಾತಿನೊಳಾಗದೆನ್ನಯ ಭಕ್ತಿ ಕೇಳೆಂದ ||

ಆರು ಕೆಲವರು ಪಾಪಿಗಳು ಸಂ
ಸಾರಭಯದಿಂದೆನ್ನ ನೆಟ್ಟನೆ
ಸಾರಿ ಭಜಿಸುತ್ತಿಹರು ಕೇಳೈ ಪಾರ್ಥ ನಿಶ್ಚಯವ |
ನಾರಿಯರು ವಶ್ಯವೈಶ್ಯಶೂದ್ರ ವಿ
ಕಾರಿಗಳು ಮೊದಲಾಗಿಯೆನ್ನಯ
ಪಾರಪದವನು ಸೇರುವರು ಕಲಿ ಪಾರ್ಥ ಕೇಳೆಂದ ||

ಧರ್ಮಿಯೆಹ ಬ್ರಾಹ್ಮಣನು ಭಕ್ತಿಯೆ
ವರ್ಮವಹ ಕ್ಷತ್ರಿಯನು ಮೊದಲಹ
ರುರ್ವಿಗಧಿಕದ ಪದವ ಪಡೆಯುವರೆಂಬುದಚ್ಚರಿಯೇ |
ಕರ್ಮಸಾಧನ ಮೆನಿಪ ಮಾನವ
ಧರ್ಮವನು ನೀನೈದೆ ಮರೆಯದೆ
ನಿರ್ಮಲದೊಳಾತೆರದೊಳೆನ್ನನು ಭಜಿಸು ನೀನೆಂದ ||

ಎನ್ನೊಳೇ ಮನವನು ನಿಲಿಸು ನೀ
ನೆನ್ನನೇ ಜಪಿಸೆರಗು ನಿಜದಿಂ
ದೆನ್ನೊಳತ್ಯಾಸಕ್ತಿಯಿಂದಲೆ ಭಕ್ತನೀನಾಗು |
ಭಿನ್ನಭಾವವನುಳಿದು ಚಿತ್ತವ
ನೆನ್ನೊಳೀಪರಿ ನಿಲಿಸಿದೊಡೆ ನೀ
ನೆನ್ನನೈದುವೆ ಸತ್ಯವಿದು ಕಲಿ ಪಾರ್ಥ ಕೇಳೆಂದ ||

— ಇಂತು ಸನ್ಯಾಸಯೋಗವೆಂಬ ನವಮಾಧ್ಯಾಯಂ ಸಂಪೂರ್ಣಂ.

# ದಶಮಾಧ್ಯಾಯಂ

ಸೂಚನೆ || ಪರಮಯೋಗವಿಭೂತಿಯನು ವಿ
ಸ್ತರಿಸಿದನು ಪಾರ್ಥಂಗೆ ಕರುಣಾ
ಕರ ಮುರಾಂತಕ ಕೃಷ್ಣನೆಲೆ ಧೃತರಾಷ್ಟ್ರ ಕೇಳೆಂದ ||

ಮತ್ತೆ ಕೇಳೈ ಪಾರ್ಥ ನಾನ
ತ್ಯುತ್ತಮಪ್ರಿಯನಹ ನಿನಗೆ ಕೃಪೆ
ವೆತ್ತುಸಲೆ ಲೇಸಾಗಬೇಕೆಂಬೀಬಯಕೆಯಿಂದ |
ಸತ್ಯದಿಂ ದಾವುದ ನುಡಿವೆ ನದ
ಚಿತ್ತದಿಂದವಧರಿಪುದೆನ್ನ ಗು
ಣೋತ್ತಮದ ಸುವಿಭೂತಿವಿಭವವನೆಂದನಸುರಾರಿ ||

ಕಮಲಭವ ದೇವೇಂದ್ರ ಮೊದಲಾ
ದಮರರಿಗೆ ಮಹರುಷಿಗಳಿಗೆ ತ
ತ್ಕ್ರಮದೊಳೆಲ್ಲರಿಗಾದಿ ನನಾಗಿರ್ಪ್ಪ ಕತದಿಂದ |
ಅಮರಗಣ ಮುನಿನಿಕರ ವೆನ್ನ ಯ
ಸಮಯದುತ್ಪತ್ತಿಯನರಿಯರಾ
ನಮಲನಜ ನವ್ಯಕ್ತನಾಗಿಹೆ ಪಾರ್ಥ ಕೇಳೆಂದ ||

ಆವನೆನ್ನನು ಜನನವಿಲ್ಲದ
ದೇವದೇವ ನನಾದಿಲೋಕಕೆ
ಭಾವಿಸಲ್ಕೆ ಮಹೇಶ್ವರನು ಮೆಂದೀಪರಿಯಲರಿವ |
ಜೀವರೊಳಗೆ ವಿವೇಕಿಯಾತನೆ
ಆವಿಧದ ಪಾತಕದದೆಸೆಯಿಂ
ಭಾವನನು ಬಿಡುಗಡೆಯನೈದುವ ಪಾರ್ಥ ಕೇಳೆಂದ ||

ವಸ್ತುನಿಶ್ಚಯ ಶಾಸ್ತ್ರದರಿವು ಸ
ಮಸ್ತರೊಳಗೆಚ್ಚರಿಕೆ ಸೈರಣೆ
ಸತ್ವಎಂದ್ರಿಯನಿಗ್ರಹವು ಮಂತಃಕರಣಜಯುವು |
ವಿಸ್ತರದ ಸುಖದುಃಖ ಸಿರಿಗಳ
ಷಸ್ಥೆ ಬಡತನ ಭಯುವಭಯವಿವು
ಚಿತ್ತವಿಸು ಸಂಸಾರಿಗಳಿಗೆನ್ನಿಂದಲಹುವೆಂದ ||

ಕೊಲ್ಲದಿರವು ಸಮಸ್ತಪ್ರಾಣಿಗ
ಳಲ್ಲಿ ಸಮತೆಯು ತುಷ್ಟಿ ತಪವಾ
ಸಲ್ಲಲಿತದಾನವು ಯಶಸ್ಸಪಕೀರ್ತಿ ಮೊದಲಾದ |
ಫಲ್ಲವಿಪ ಬಹುಚೇಷ್ಟೆ ಪ್ರಾಣಿಗ
ಳೆಲ್ಲರಿಗೆ ಕೇಳೆನ್ನ ದೆಸೆಯಿಂ
ನಿಲ್ಲದಹ ಭಾವಗಳು ಛಂದದೊಳೆಂದನಸುರಾರಿ ||

ಸುರನರಾದಿಗಳಾರ ಸಂತತಿ
ನಿರುತದಿಂ ಕಮಲಜನ ಮಾನಸ
ಪರತನುಜರೆಂದೆಂಬ ನಾಲುಕು ಮನುಗಳವರುಗಳು |
ಹಿರಿಯರೆನಿಸಿದ ಸಪ್ತಋಷಿಗಳು
ಗರುವರೆನ್ನಂಶಂಗಳಾಗಿಯೆ
ಭರದಲೆನ್ನನು ನೆನೆಯುತಿಹರೆಲೆ ಪಾರ್ಥ ಕೇಳೆಂದ ||

ಆವನೊಬ್ಬನು ಎನ್ನೊಳಿಹ ವರ
ಭಾವಯೋಗೈಶ್ವರ್ಯಮಹಿಮೆಯ
ಜೀವರೊಳು ನಿರ್ಧರಿಸಿ ತಿಳಿವನೊ ಆಮುನೀಶ್ವರನು |
ಪಾವನನು ವರಮೋಕ್ಷಸಿದ್ಧಿಯ
ನೀವ ನಿಶ್ಚಲಯೋಗದಿಂದುಪ
ಜೀವಿಸುವನದರಲ್ಲಿ ಸಂಶಯವಿಲ್ಲಕೇಳೆಂದ ||

ಸರ್ವಜನದುದುಭವಕೆ ತಾನೇ
ಸರ್ವದಾ ಕಾರಣವೆನಿಸುವೆನು
ಸರ್ವಜಗಚೇಷ್ಟಿಸುತಿಹುದು ಕೇಳೆನ್ನ ದೆಸೆಯಿಂದ
ಸರ್ವಥಾ ಈಪರಿಯರಿದು ನೆರೆ
ಸರ್ವವಿದರೇಕಾಗ್ರಚಿತ್ತರು
ಸರ್ವಕಾಲದೊಳೆನ್ನ ಭಜಿಸುವರೆಂದನಸುರಾರಿ ||

ಎನ್ನೊಳೆರಗಿದ ಚಿತ್ತದವರುಗ
ಳೆನ್ನೊಳೇ ಪ್ರಾಣವನು ನಿಯಮಿಸು
ತೆನ್ನ ನಿಜವನು ತವೊಳೊಬ್ಬರಿಗೊಬ್ಬರರುಹುತಲಿ |
ಎನ್ನನನುದಿನ ಕೀರ್ತಿಸುತಲ
ನ್ಯೋನ್ಯಭಾವದಿ ರಮಿಸುತಲೆ ಸಂ
ಪನ್ನಮುನಿಗಳು ತುಷ್ಟಿಬಡುತಿಹ ರೆಂದನಸುರಾರಿ ||

ಪ್ರೀತಿಪೂರ್ವಕವಾ ಗನವರತ
ನೀತಿಯಿಂದಲೆ ಯೋಗಯುತರಾ
ಗೀತರದಿ ಭಜಿಸುತ್ತಲಿರುತಿಹ ಶಮದಮಾತ್ಮರಿಗೆ |
ತಾತ ಕೇಳವರೆನ್ನ ನೈದುವ
ರೋತದಾವುದರಿಂದ ಲಾವಿ
ಖ್ಯಾತಮಾದಾಬುದ್ಧಿಯೋಗವ ಕೊಡುವೆನಾನೆಂದ ||

ಆಮಹಾಮುನಿಗಳಿಗೆ ಪ್ರೇಮದಿ
ತಾಮಸದ ಗುಣವಾದವಿದ್ಯಾ
ಸ್ತೋಮದಿಂ ಜನಿಸಿದ ತಮಸ್ಸನತಿಪ್ರಭೆಯನುಳ್ಳ |
ಆಮಹಾವಿಜ್ಞಾನದೀಪದಿ
ನೇಮದಿಂ ಕೆಡಿಸುವೆನು ಭಕ್ತ
ಸ್ತೋಮವನು ರಕ್ಷಿಸಲಿಕೋಸುಗ ಪಾರ್ಥ ಕೇಳೆಂದ ||

ಹರಿ ನುಡಿಯಲೀಪರಿ ಧನಂಜಯ
ಮುರಳಿ ಬಿನ್ನಹಮಾಡಿದನು ನೀಂ
ಪರಮಪಾವನ ಗುರು ಪರಬ್ರಹ್ಮವು ಪರಂಧಾಮು |
ಹರಿಯು ಋಷಿಗಳು ನಿನ್ನ ನಕ್ಷಯ
ಪರಮಪೂರುಷನಾದಿದೇವನು
ನಿರುತದಿಂದಜ ಸರ್ವಗತ ನೆನುತಿಹರು ಕೇಳೆಂಡು ||

ದೇವಋಷಿ ನಾರದರು ಮಸಿತನು
ದೇವಲನು ದ್ವೈಪಾಯನನು ಭೂ
ದೇವರೆನಿಪ ಸಮಸ್ತಮುನಿಗಳು ನಿನ್ನ ಮಹಿಮೆಗಳ |
ಭಾವದಿಂ ಕೊಂಡಾಡುವರೆಲ್ಲೈ
ದೇವ ನೀನೇ ಎನಗೆ ಹೇಳಿದೆ
ಯಾವಿಭೂತಿಯನಿನ್ನು ವಿಸ್ತರವಾಗಿ ಹೇಳೆಂದ ||

ಎಲೆಹರಿಯೆ ನೀನಾವುದೊಂದನು
ನಲಿದೆನಗೆ ಪೇಳಿದೆ ಯದೆಲ್ಲವ
ನೆಲೆಯಿದೆಂದೇ ಬಗೆವೆ ನಿನ್ನಯ ನಿಜದ ನಿಶ್ಚಯವ |
ಹಲವು ದೇವರು ದಾನವರುಗಳು
ಹೊಲಬನರಿಯದ ಕಾರಣದಿ ನಿ
ರ್ಮಲದಭಿವ್ಯಕ್ತಿಯನು ಕೃಪೆಮಾಡೆಂದನಾ ಪಾರ್ಥ ||

ಸಕಲಭೂತವ ಸೃಜಿಸುವನೆ ಆ
ಸಕಲಭೂತೇಶ್ವರನೆ ಪಾವನ
ಸಕಲದೇವರ ದೇವ ಪುರುಷೋತ್ತಮ ಜಗತ್ಪತಿಯೇ |
ಪ್ರಕಟದಿಂ ನೀಂ ನಿನ್ನುವನು ಸು
ವ್ಯಕುತ ನಿನ್ನಿಂದರಿವೆ ಯಲ್ಲದೆ
ಸಕಲಜಗ ದಿಟಕರಿಯುದೆಲೆ ಮುರವೈರಿ ಕೇಳೆಂದ ||

ಎಲೆಹರಿಯೆ ನೀನಾವ ಕೆಲವೀ
ಬಲುವಿಭೂತಿಗಳಿಂದ ಲೋಕಂ
ಗಳನು ವ್ಯಾಪಿಸಿಕೊಂಡು ನೆಲಸಿಹೆ ನಿತ್ಯವೆನಿಸುತಿಹ |
ಹಲವೆನಿಪ ನಿನ್ನಾ ವಿಭೂತಿಯ
ನೆಲೆಯ ನೆಲ್ಲವನುಳುಹದೆನಗುರೆ
ಸಲುವಿನಿಂ ಕರುಣಿಸಲು ಬೇಹುದು ದೇವ ಕೇಳೆಂದ ||

ಪರಮಯೋಗೀಶ್ವರನೆನಿಸುತಿಹ
ಹರಿಯೆ ನಿನ್ನನು ನಿತ್ಯವಾಗಿಯೆ
ನಿರುತದಿಂ ಚಿಂತಿಸುತಲಾನೆಂತರಿವೆ ನಿನ್ನುವನು ||
ಸುರನರಾದಿ ಸಮಸ್ತ ಜೀವರೊಳಿರದೆ
ನೀನಾವಾವಪರಿಯಿಂ
ಹಿರಿದು ನೆನೆಯಿಸಿಕೊಂಬೆ ಯದುನೆನಗರುಹಬೇಕೆಂದ ||

ಎಲೆಜನಾರ್ದನ ನಿನ್ನ ಯೋಗದ
ಹಲವುವಿಧದ ವಿಭೂತಿಗಳ ನೀ
ನೊಲಿದು ವಿಸ್ತರದಿಂದ ಕೃಪೆಮಾಡೈ ಕಥಾಮೃತವ |
ಸಲೆ ಸೊಗಸಿ ಕೇಳ್ವೆನೆಗೆ ತೃಪ್ತಿಯು
ನೆಲೆಗೆ ದೊರಕದ ಕಾರಣದಿ ನಿ
ರ್ಮಲದ ಯೋಗವಿಭೂತಿಯನು ಮಗುಳೊರೆಯಬೇಕೆಂದ ||

ಈಪರಿಯೆಲಜರ್ಜುನನು ನಾನಾ
ರೂಪಿನಿಂ ಬಿನ್ನೈಸೆ ಕರುಣದ
ಲಾಪರಮಪುರುಷೋತ್ತಮನು ಪಾರ್ಥಂಗೆ ಪರಿವಿಡಿದು |
ರೂಪುಗಳ ನಾಮಂಗಳನು ತ
ದ್ರೂಪಸಾಮರ್ಥ್ಯಂಗಳನು ನಿಜ
ರೂಪದಿಂ ಜನಿಸಿದುದನರಿಪಿದನಂದು ಮುರವೈರಿ ||

ಎಲೆಧನಂಜಯ ಸಕಲಭೂತಂ
ಗಳ ಹೃದಯದೊಳಗಿರ್ಪ ಜೀವನು
ನೆಲೆಗೆ ನಾನೇಸರ್ವಭೂತಂಕೆಳಿಗೆ ಪರಿಕಿಸಲು |
ಸಲೆ ಮೊದಲು ನಡು ಕಡೆಗಳಾನೀ
ನೆಲೆಯ ಬಲ್ಲವನಾವನೈ ಕುರು
ಕುಲತಿಲಕ ಕೇಳೆಂದನಾಮುರವೈರಿ ಕರುಣದಲಿ ||

ದ್ವಾದಶಾದಿತ್ಯರೊಳು ವಿಷ್ಣುವು
ಹೋದಯದ ಜ್ಯೋತಿರ್ಗಣಂಗಳೊ
ಳಾದಿವಾಕರನಹೆನು ಮತ್ತೆ ಮರುದ್ಗಣಂಗಳೊಳು |
ಭೇದಿಸಲ್ಕೆ ಮರೀಚಿಯಶ್ವಿನಿ
ಯಾದಿಯಹ ತಾರೆಗಳೊಳಗ್ಗಳ
ವಾದ ಶಶಿ ತಾನಾಗಿಹೆನು ಕಲಿ ಪಾರ್ಥ ಕೇಳೆಂದ ||

ಶ್ರುತಿಗಳೊಳು ವರಸಾಮವಾದೇ
ವತೆಗಳೊಳು ಸುರನಾಥ ನಾಂ ನಿ
ರ್ಮಿತದ ಸಕಲೇಂದ್ರಿಯದೊಳಗೆ ಮನವಾಗಿ ನಾನಿಹೆನು |
ನುತಸಮಸ್ತ ಪ್ರಾಣಿವರ್ಗ
ಸ್ಥಿತಿಯೊಳಂತಃಕರಣವೃತ್ತಿಯು
ಗತಿಯರಿವ ಚೈತನ್ಯ ನಾನಾಗಿಹೆನು ಕೇಳೆಂದ ||

ಶಂಕರನು ರುದ್ರರೊಳು ಯಕ್ಷರ
ಸಂಕೆಗಳೊಳು ಕುಬೇರ ನಾಂ ನಿ
ಶ್ಯಂಕಪಾವಕನಾಗಿಹೆನು ಕೇಳಷ್ಟವಸುಗಳೊಳು |
ತೆಂಕಬಡಗಣ ಗಿರಿಗಳೊಳಗಕ
ಳಂಕ ಮೇರುಗಿರೀಂದ್ರನಾಗಿಹೆ
ಪಂಕಜಾಕ್ಷನು ಪಾವನನು ನಾನೆಂದ್ಧನಸುರಾರಿ ||

ನರಪತಿಪುರೋಹಿತರೊಳೆನ್ನನು
ಬೃಹಸ್ಪತಿಯೆಂದು ತಿಳಿ ಸಂ
ಗರದ ದಳಪತಿಗಳೊಳು ನಾನೇ ಸ್ವಾಮಿ ಕಾರ್ತಿಕನು |
ಸರಸಿಗಳೊಳು ಸಮುದ್ರನಾಗಿಹೆ
ನಿರುತವಿದು ಕೇಳೈ ಧನಂಜಯ
ಪರಮತತ್ವಜ್ಞಾನನಿಷ್ಠರು ಬಲ್ಲರಿದನೆಂದ ||

ಉತ್ತಮಮರ್ಷಿಗಳೊಳಾಂ ಭೃಗು
ಮತ್ತೆ ಕೇಳಕ್ಷರವೆನಿಸುವ
ಯ್ವತ್ತರೊಳ ಗೋಂಕಾರವಾಗಿಹೆ ನಿಖಿಲಯಜ್ಞದೊಳು ||
ಸತ್ಯದಿಂ ಜಪಯಜ್ಞವಾಗಿಹೆ
ನಿತ್ತಕೇಳೈ ಸ್ಥಾವರಂಗಳೆ
ಮೊತ್ತದೊಳು ಹಿಮವಂತನೈ ನಾನೆಂದನಸುರಾರಿ ||

ಸರ್ವವೃಕ್ಷಂಗಳೊಳು ನಾನೇ
ಉರ್ವಿಯೊಳಗಶ್ವತ್ಥ ಬಳಿಕೀ
ಸರ್ವದೇವಮುನೀಂದ್ರರೊಳು ನಾರದನು ನಾನಹೆನು |
ಸರ್ವಗಂಧರ್ವರೊಳ ಗುತ್ತಮ
ಸರ್ವತೋಮುಖ ಚಿತ್ರರಥ ನಾಂ
ಸರ್ವಸಿದ್ಧರ ನಿವಹದೊಳು ನಾಂ ಕಪಿಲಮುನಿಯೆಂದ ||

ತುರಗದೊಳ ಗಮೃತದಲಿ ಜನಿಸಿದ
ಸುರರಧಿಪನುಚ್ಚೈಶ್ರವವು ದಿ
ಕ್ಕರಿಗಳೊಳಗೈರಾವತವು ನಾನೇ ನಿದಾನಿಸಲು |
ನರರೊಳಗೆ ಪಟ್ಟವನು ಧರಿಸಿದ
ಹಿರಿಯರಸು ನಾನಾಗಿ ಲೋಕವ
ಪೊರೆಯುತಿಹೆ ಯುಗಧರ್ಮದಲಿ ಕಲಿ ಪಾರ್ಥ ಕೇಳೆಂದ ||

ಆಯುಧಂಗಳೊ ಳಧಿಕವಹ ವ
ಜ್ರಾಯುಧವು ನಾನಹೆನು ಕರವೀ
ವಾಯುತದ ಧೇನುಗಳೊಳಗೆ ಸುರಧೇನು ನಾಂ ದಿಟಕೆ |
ಈಯುದಯಿಸುವ ಪ್ರಜೆಯ ಜನನದು
ಪಾಯವಹ ಕಂದರ್ಪ ನಾನಹೆ
ನಾಯುತದ ವಾಸುಕಿಯು ನಾಂ ಸರ್ಪಂಗಳೊಳಗೆಂದ ||

ವರಮಹಾನಾಗರುಗಳೊಳು ನಾಂ
ಹಿರಿಯನಂತನು ಜಲಚರಂಗಳೊ
ಳರಸೆನಿಸುತಿಹ ವರುಣ ನಾನೇ ಪಿತೃಗಣಂಗಳೊಳು |
ಅರಿಯಮನು ನಾನಾಗಿಹೆನು ಕೇ
ಳುರುತರದ ದಂಡಿಸುವರವರೊಳು
ವರಕೃತಾಂತನು ನಾನು ತಿಳಿ ನೀನೆಂದನಸುರಾರಿ ||

ವೀರದೈತ್ಯರೊಳಮಲಭಕ್ತನು
ದಾರಪ್ರಹ್ಲಾದನು ಕಣಾ ನಾಂ
ಕಾರಣಂಗಳೆ ನೆರವಿಯೊಳು ಕಾಲಾತ್ಮನಾಗಿಹೆನು |
ಕ್ರೂರಮೃಗಸಂತತಿಯೊಳಗ್ಗದ
ಶೂರಸಿಂಹನು ನಾನು ಖಗಕುಲ
ಸೇರುವೆಯೊಳು ಗರುತ್ಮನಾಗಿಹೆ ನೆಂದನಸುರಾರಿ ||

ಪಾವನವ ಮಾಡುವರೊಳುತ್ತಮ
ಪಾವನದ ಮಾರುತನು ಕೈದುವ
ಭಾವದಿಂ ಧರಿಸುವರೊಳಗ್ಗದ ರಾಮನಾಗಿಹೆನು |
ಈವಿವಿಧಮತ್ಸ್ಯಂಗಳೊಳು ಸಂ
ಭಾವಿಸಲು ನಾಂ ಮಕರ ನದಿಗಳೊ
ಳಾವಿಶೇಷದ ಗಂಗೆಯಾಗಿಹೆ ನಂದನಸುರಾರಿ ||

ಮೊದಲು ನಡು ಕಡೆ ನಾನು ಸೃಷ್ಟಿಯ
ಪಡೆ ವರವಿದ್ಯಂಗಳೊಳು ನಿಜ
ಪದವನಾಧ್ಯಾತ್ಮವಿದ್ಯೆಯುಸಿದ್ಧಿ ತಿಳಿ ನಾನು |
ಪ್ರತಿವಾದಿಗಳಲ್ಲಿ ತತ್ವದ
ಸಾಧ ನಿರ್ಧರಿಸಿರುವ ವೇದಾಂ
ತದ ರಹಸ್ಯದ ವಾದವಾಗಿಹೆನೆಂದನಪುರಾರಿ ||

ಅಕ್ಷರಗಳೊಳಕಾರ ನಾನೇ
ಶಿಕ್ಷೆ ವ್ಯಾಕರಣದ ಸಮಾಸದ
ಕಕ್ಷೆಯೊಳು ನೋಡುವೊಡೆ ದ್ವಂದ್ವಸಮಾಸವಾಗಿಹೆನು |
ಅಕ್ಷಯದ ಕಾಲಸ್ವರೂಪನು
ಶಿಕ್ಷಿಸುವವರ ವಿಶ್ವತೋಮುಖ
ರಕ್ಷಕನು ಕಮಲಜನು ನಾಂ ಕೇಳೆಂದನಸುರಾರಿ ||

ಮೃತ್ಯುನಾನೆಲ್ಲವನು ಭಕ್ಷಿಪ
ಮತ್ತೆ ಮುಂದಹ ವಸ್ತುಗಳಿಗು
ತ್ಪತ್ತಿನಾನಾಗಿಹೆನವರ ಹೆಚ್ಚುಗೆಯಲಾಂ ಮುದದಿ |
ಇತ್ತಲೀನಾರಿಯರೊಳಗ್ಗದ
ಕೀರ್ತಿ ಲಕ್ಷ್ಮಿ ಸರಸ್ವತಿಗಳಾ
ಸತ್ಯಧೃತಿ ಸ್ಮರಣೆ ಸೆನಹು ವರಮೇಧೆ ನಾನೆಂದ ||

ವರಬೃಹತ್ಸಾಮವು ಕಣಾ ನಾಂ
ಹಿರಿಯ ಸಾಮಂಗಳೊಳು ಛಂದದ
ಪರಿವಿಡಿಯ ಮಂತ್ರಂಗಳೊಳು ಗಾಯತ್ರಿನಾಂ ದಿಟದಿ |
ಮೆರೆವ ಮಾಸಂಗಳೊಳು ನಾನೇ
ಸರಸವಹ ಮಾರ್ಗಶಿರ ಋತುಗಳೊ
ಳೆಸೆನಿಸುವ ವಸಂತಋತು ನಾನೆಂದನಸುರಾರಿ ||

ಠಕ್ಕರೊಳು ಜೂಜಾನು ತೇಜದಿ
ಮಿಕ್ಕಿಹವರ್ಗೊಳು ತೇಜವಾಗಿಹೆ
ತಕ್ಕ ಸತ್ವವನುಳ್ಳವರಿಗಾಸತ್ವವಾಗಿಹೆನು।
ಹೆಕ್ಕಳಿಪ ವ್ಯವಸಾಯವಂತರಿ
ಗಕ್ಕರಿನ ವ್ಯವಸಾಯು ನಾನು ಜ
ಯಕ್ಕೆ ಜಯವಾಗಿಹೆನು ನಾನೆಲೆ ಪಾರ್ಥ ಕೇಳೆಂದ.॥

ಯದುಕುಲದ ವೃಷ್ಣಿಗಳೊಳಾಂ ಬಂ
ದೊದವಿಹೆನು ವಸುದೇವತನಯುನ
ಪದವಿಯಲಿ ಪಾಂಡವರೊಳರ್ಜುನದೇವನಾಗಿಹೆನು।
ಮದವಳಿದ ಮುನಿಗಳೊಳು ನಾನೇ
ವಿದಿತವೇದವ್ಯಾಸನಾಗಿಹೆ
ತುಧಿಗೆ ಕವಿಗಳೊಳಧಿಕ ಶುಕ್ರಾಚಾರ್ಯ ನಾನೆಂದ॥

ದಂಡಿಸುವರೊಳಗಧಿಕತರವಹ
ದಂಡರೂಪನು ನಾನು ಗೆಲವನು
ಬಂಡಣದಿ ಬಯುವರಿಗಾನತಿ ನೀತಿಯಾಗಿಹೆನು।
ಮಂಡಲದ ಗೋಪ್ಯಂಗಳೊಳಗು
ದ್ದಂಡವಹ ಮೌನಸ್ವರೂಪನ
ಖಂಡವಿಮಲಜ್ಞಾನಿಗಳಿಗಾ ಜ್ಞಾನವಾಗಿಹೆನು॥

ಸಕಲಭೂತಕ್ಕಾವುದೊಂದ
ವ್ಯಕುತ ಕಾರಣವೆನಿಸುತಿಹುದಾ
ನಿಖಿಲವಿಶ್ವದ ಬೀಜವಾನೆನಿಸಿರ್ಪೆನಿನ್ನಿಂದ।
ಪ್ರಕಟದಿಂ ಬೇರೆನಿಸಿ ತೋರುವ
ಸಕುತಿವಿಡಿದ ಚರಾಚರಂಗಳು
ಯುಕುತಿಯಿಂ ಭಾವಿಸಲು ದಿಟಕಿಲ್ಲೆಂದನಸುರಾರಿ॥

ದಶಮಾಧ್ಯಾಯಂ

ಎಲೆಪರಂತಪ ದಿವ್ಯವೆನಿಸುವೆ
ಹಲವುಬಗೆಯ ವಿಭೂತಿವಿಭವಕೆ
ಸಲೆ ಮೊದಲು ಕಡೆಯಿಲ್ಲವೆನ್ನಯ ಯೋಗಮಾಯೆಗಳ |
ಚೆಲುವೆನಿಸುವ ವಿಭೂತಿವಿಸ್ತರ
ಜಲಧಿಯೊಳು ನಾಂ ನಿನಗೆ ಪೇಳ್ದೆನು
ಕೆಲವ ಮಿಕ್ಕವಿಭೂತಿವಿಭವಕೆ ಲೆಕ್ಕವಿಲ್ಲೆಂದ ||

ಆವವಾವುವು ವಿಭವಚೆಲುವಿಂ
ತೀವಿಕೊಂಡಿಹ ತೇಜದುನ್ನತಿ
ಭಾವದಿಂ ನೆರೆ ಮೆರೆಯುತಿಹುವಾ ಸಕಲವಸ್ತುಗಳು |
ಭಾವಿಸಲು ಕೇಳೆನ್ನ ಘನತೇ
ಜೋವಿಶೇಷಾಂಶಂಗಳಿಂದುಪ
ಜೀವಿಸುತಲಿಹುವೆಂದು ತಿಳಿ ನೀನೆಂದನಸುರಾರಿ ||

ಅಲ್ಲದಿರೆ ಮೇಣ್ನಿನಗೆ ನಾಂ ಪೇ
ಳ್ದಿಲ್ಲವನು ನೀನರಿಯುವದರಿಂ
ದೆಲ್ಲ ಫಲ ನಿನಗೇನು ನೆಲೆಯಾಗಿರದು ಪೇಳುವೊಡೆ |
ನಿಲ್ಲದೆನ್ನೊಂದೇಕದೇಶದ
ಸಲ್ಲಲಿತಸತ್ವದಲಿ ಜಗವಿದ
ನೆಲ್ಲವನು ಧರಿಸಿಹೆನು ಭಾರತಮಲ್ಲ ಕೇಳೆಂದ ||

ಇಂತು ವಿಭೂತಿಯೋಗವೆಂಬ ದಶಮಾಧ್ಯಾಯಂ ಸಂಪೂರ್ಣಂ

# ಏಕಾದಶಾಧ್ಯಾಯಂ

ಸೂಚನೆ || ಉಭಯಬಲಮಧ್ಯದಲಿ ವಿಶ್ವ
ಪ್ರಭು ಮುರಾರಿ ನರಂಗೆ ತನ್ನಯ
ವಿಭವವೆನಿಸುವ ವಿಶ್ವರೂಪವ ನೊಲಿದು ತೋರಿಸಿದ ||

ಬಿನ್ನವಿಸಿದನು ಪಾರ್ಥ ಕೇಳೆಸ
ಚಿನ್ಮಯನೆ ಯಧ್ಯಾತ್ಮವೆಸಿಸುವ
ಸನ್ನಿಹಿತವತಿಗೋಪ್ಯವೆನಿಸುವ ಯೋಗವನು ನೀನು
ಎನ್ನ ಪರಮಾನುಗ್ರಹಾರ್ಥದಿ
ಮುನ್ನ ಹೇಳಿದುದದನುಕೇಳ
ಲ್ಕೆನ್ನೊಳಿರ್ಪಜ್ಞಾನತೊಲಗಿತು ದೇವ ಕೇಳೆಂದ ||

ದೇವ ಕಮಲದಳಾಕ್ಷ ನಿನ್ನಿಂ
ದೀವಿವಿಧಭೂತಂಗಳುದಯವು
ಜೀವನವು ಮೃತಿ ನಿನ್ನದೆಸೆಯಿಂದಾಗುತಿಹುದೆಂದು |
ದೇವ ನಿನ್ನಿಕ್ಷಯಮಹಿಮೆಯನು
ಭಾವದಿಂ ನಾಂ ಕೇಳಿ ತಿಳಿದೆನು
ಪಾವನೋತ್ತಮವಿಶ್ವರೂಪವ ತೋರಬೇಕೆಂದ ||

ಪರಮಪುರುಷೋತ್ತಮನೆ ನಿನ್ನಯ
ವರವಚನದಿಂದಾವಪರಿಯಲಿ
ಭರಿತರೂಪವನೊರೆದೆ ಯಿಾಪರಿ ತಪ್ಪದಿದು ನಾನು |
ದರುಶನವ ಮಾಡಲ್ಕೆ ಬಯಸಿದೆ
ಪರಮವೆನಿಸುವ ನಿನ್ನಮಹದೈ
ಶ್ವರಿಯ ರೂಪವ ತೋರಬೇಕೆನುತಿರ್ದನಾಪಾರ್ಥ ||

ಯೋಗಮಾಯಾಧೀಶ ಎನ್ನಿಂ
ದೀಗ ನಿನ್ನೈಶ್ವರ್ಯರೂಪವು
ಬೇಗ ಕಾಣಲು ಶಕ್ಯವಹುದೆಂತೆಂದು ಚಿತ್ತದಲಿ |
ಈಗ ನೀಂ ನೆರೆ ಬಗೆದೆಯಾದೊಡೆ
ಯಾಗರುವ ನಿಜ ನಿತ್ಯ ನಿರ್ಮಲ
ಯೋಗರೂಪವನೆನಗೊಲಿದು ತೋರೆಂದನಾ ಪಾರ್ಥ ||

ಎಂದು ಬಿನ್ನಹಮಾಡಲಾಗೋ
ವಿಂದನೆಂದನು ಪಾರ್ಥ ನಾನಾ
ಛಂದದಿಂದಹ ಪಲವುವರ್ಣದ ಪಲವುತೆರನಾದ |
ಕುಂದದೆನ್ನ ಸಹಸ್ರಸಂಖ್ಯೆಯೊ
ಳೊಂದಿ ಮೆರೆದಿಹ ದಿವ್ಯಮೂರ್ತಿಗ
ಳಂದವನು ಸುಖದಿಂದ ನೀಂ ನೋಡೆಂದನಸುರಾರಿ ||

ಎನ್ನವರಮೂರ್ತಿಯಲಿಕಾಂಬವು
ಭಿನ್ನವಾದಚರಾಚರಂಗಳು
ಸನ್ನಿಹಿತವಾಗೊಂಡುತಾವಿನೊಳಿರ್ಪವೆಲ್ಲವನು |
ಅನ್ಯವಾವುದ ನೋಡಬಯಸುವೆ
ಯಿನ್ನದೆಲ್ಲವಭೀತಿಯಿಲ್ಲದೆ
ನಿನ್ನಮನದೊಲವಿಂದನೀಂನೋಡೆಂದನಸುರಾರಿ ||

ದ್ವಾದಶಾದಿತ್ಯರನು ವಸುಗಳ
ನಾದಿರುದ್ರರ ನಶ್ವಿನಿಗಳನು
ಸಾದರದೊಳೇಕೋನ ಪಂಚಾಶನ್ಮರುತ್ತುಗಳ |
ವೇದಸಿದ್ಧರ ನೆಲ್ಲರನು ನೀ
ನಾದಿಯಲಿ ಕಂಡರಿಯದಿಹಹಲ
ವಾದಚಿತ್ರದ ಮೂರ್ತಿಗಳ ನೋಡೆಂದನಸುರಾರಿ ||

ನಿನ್ನ ತಾಮಸ ದೃಷ್ಟಿಯಿಂದವೆ
ಯೆನ್ನ ನಿಜರೂಪವನು ನೋಡ
ಲ್ಕಿನ್ನು ನೀ ನಾರದಕತದಿವರದಿವ್ಯದೃಷ್ಟಿಯನೀ |
ಸನ್ನಿಹಿತವಾಗಿಯೆ ಕೊಡುವೆ ನೀ
ನೆನ್ನ ಯೋಗೈಶ್ವರ್ಯವನು ಸಂ
ಪನ್ನವಾಗಿಯೆ ನೋಡುನೋಡೆಂದನು ಮುರಧ್ವಂಸಿ ||

ಈಪರಿಯ ನುಡಿದದರನಂತರ
ವಾ ಪರಮಯೋಗಾಧಿಪನೆ ನಿ
ಷ್ಪಾಪರಮಪುರುಷೋತ್ತಮನು ಪಾರ್ಥಂಗೆ ಕರುಣದಲಿ
ತಾಪರಕೆಪರತರವೆನಿಪ ನಿ
ರ್ಲೇಪಯೋಗೈಶ್ವರ್ಯವೆನಿಸುವ
ರೂಪನೆರೆ ತೋರಿಸಿದನೈ ಧೃತರಾಷ್ಟ್ರ ಕೇಳೆಂದ ||

ಹಲವುಮುಖನೇತ್ರಂಗಳಿರುತಿಹ
ಹಲವು ದಿವ್ಯಾಭರಣ ತೊಡಿಗೆಯ
ತಳೆದುನೆಗಹಿದ ಥಳಥಳಿಸ ದಿವ್ಯಾಯುಧಾವಳಿಯ |
ಹಲವುಪರಿಯ ಮಹತ್ತರಾದ್ಭುತ
ಗಳನು ತೋರುವ ದಿವ್ಯರೂಪವ
ನೊಲಿದುತಾ ಕೈಕೊಂಡನೈಸುರನಿಕರ ಬೆರಗಾಗೆ ||

ದಿವ್ಯವನಮಾಲೆಗಳೊಳೊಪ್ಪುವ
ದಿವ್ಯವಸ್ತ್ರಂಗಳನು ಧರಿಸಿದ
ದಿವ್ಯಪರಿಮಳವೆಸೆವ ವರಗಂಧಾನು ಲೇಪನದ |
ದಿವ್ಯಸಕಲೈಶ್ವರ್ಯಮಯುವಹ
ದಿವ್ಯತೇಜದಿ ಮೆರೆವನಂತನ
ನವ್ಯಯನ ವರವಿಶ್ವರೂಪನ ಕಂಡನಾ ಪಾರ್ಥ ||

## ಏಕಾದಶಾಧ್ಯಾಯಂ.

ಗಗನದಲಿ ಸಾಸಿರದಿವಾಕರ
ರೊಗೆಯಲೊಂದೇಬಾರಿತೋರುವ
ಮಿಗಿಲೆನಿಪ ಬೆಳಗಾವನೊಬ್ಬನ ವಿಶ್ವಮೂರುತಿಯು |
ಹೊಗರುಗುವ ಪ್ರಭೆಗೆಣೆಯಹರೆತಾಂ
ಜಗದೊಳೆಣೆಯಹುದಲ್ಲದುಳಿದುದ
ಬಗೆವರೆನ್ನಳವಲ್ಲವೈ ಧೃತರಾಷ್ಟ್ರ ಕೇಳೆಂದ ||

ಆ ಸಮಯದಲಿ ದೇವ ದೇವನ
ಭಾಸುರ ಶ್ರೀಮೂರ್ತಿಯೊಂದರ
ಲೀ ಸಮಸ್ತ ಚರಾಚರಂಗಳು ಹಲವು ತೆರನಾದ |
ವಾಸನೆಗಳಿಂ ಬೇರೆ ಬೇರೆ ವಿ
ಶೇಷವಾಗಿಹುದೆಲ್ಲವನು ಲ
ಕ್ಷ್ಮೀಶನಲಿ ಕಲಿಪಾರ್ಥ ಕಂಡನು ಭೂಪಕೇಳೆಂದ ||

ಬಳಿಕ ವಿಸ್ಮಿತನಾಗಿ ವಂದಿಸಿ
ಫಲುಗುಣನು ಶಿವಶಿವ ಎನುತತನು
ಪುಳಕದಿಂದುಬ್ಬರಿಸೆ ದೇವನನೋಡಿ ಕೈಮುಗಿದು |
ನಳಿನನಾಭಮುಕುಂದಲಕ್ಷ್ಮೀ
ನಿಳಯನೀನೇ ಬಲ್ಲೆನಿನ್ನನು
ತಿಳಿಯರನ್ಯರೆನುತ್ತ ಬಿನ್ನೈಸಿದನು ಕಲಿಪಾರ್ಥ ||

ಕಂಡೆ ನಿನ್ನಯಮೂರ್ತಿಯಲಿ ಬ್ರ
ಹ್ಮಾಂಡದಿರವನು ಭೂತಜಾತಿಯ
ಹಿಂಡುಹಲವನು ದೇವತೆಗಳನು ಬ್ರಹ್ಮದೇವರನು |
ಮಂಡಳಿಸಿ ಪದ್ಮಾಸನದೊಳಿಹ
ಖಂಡಪರಶುವ ನಖಿಳಋಷಿಗಳ
ಹಿಂಡವನು ಉರಗಾಧಿಪರ ನೆಲೆದೇವ ಕೇಳೆಂದ ||

ಹಲವು ಮುಖನೇತ್ರವನು ಧರಿಸಿಹ
ಹಲವುದರ ಬಾಹುಗಳ ತಾಳ್ದಿಹ
ಹಲವುರೂಪಹ ನಿನ್ನ ಕಂಡೆನು ಹಲವು ದೆಸೆಗಳಲಿ |
ಎಲೆ ವಿಮಲ ವಿಶ್ವೇಶ ನಿನ್ನಯ
ಸಲೆ ಮೊದಲುನಡುಕಡೆಯ ಸೀಮೆಯ
ನೆಲೆಯಕಾಣೆನು ವಿಶ್ವರೂಪ ನಮೋ ನಮೋ ಎಂದ ||

ಥಳಥಳಿಪರತ್ನದ ಕಿರೀಟದ
ತಳೆದಚಕ್ರದ ಗದೆಯಧರಿಸಿದ
ಹಲವುದೆಸೆಯಲಿ ಬೆಳಗಿತೇಜೋರಾಶಿಯಾಗಿರ್ಪ |
ಜ್ವಲಿಸುತಿರ್ಪನಲಾರ್ಕರಂತಿರೆ
ಹೊಳೆಹೊಳೆವ ನೆರೆನೋಡಬಾರದ
ತಿಳಿಯಲರಿಯದ ನಿನ್ನಮೂರ್ತಿಯ ಕಂಡೆನಾನೆಂದ ||

ಅರಿಯಬೇಕಾಗಿಹ ಪರಮವು
ಕ್ಷರಮೆನಿಪೆ ನೀಂ ನಿಜವು ಸಚರಾ
ಚರದ ವಿಶ್ವಕೆ ಪರಮೆನಿಸುವ ನಿಧಾನವಾಗಿರ್ಪೆ |
ನೆರೆ ಸಮೆಯದಿಹೆ ನಿತ್ಯಧರ್ಮವ
ನಿರದೆ ಕಾವ ಪುರಾಣಪುರುಷನು
ಕುರುಹಳಿದ ಪರಜೊಮ್ಮ ನೀನೆಂದೆಮ್ಮ ಮತವೆಂದ ||

ಆದಿಮಧ್ಯಾಂತಂಗಳಿಲ್ಲದ
ವಾದಕೊಳ್ಳದನಂತವೀರ್ಯದ
ಕೈದುವಿಡಿದಿಹ ಹಲವುತೋಳ್ಗಳ ವಿಶ್ವಭಾಸುರದ |
ಬೀದಿವರಿವ ಹುತಾಶವನದ
ವೇದಮಯ ಶಶಿಸೂರ್ಯನೇತ್ರದ
ಭೇದಹೊದ್ದದ ದೇವ ನಿನ್ನನು ಕಂಡೆ ನಾನೆಂದ ||

ಎಲೆಮಹಾತುಮ ಗಗನಭೂತಳ
ದೊಳಗು ದಶದಿಕ್ಕುಗಳು ನಿನ್ನಿಂ
ದುಳಿಯದಿನಿಸುಂ ತುಂಬಿಕೊಂಡಿದೆ ಯಿಾಮಹಾದ್ಭುತವ |
ನೆಲೆಯ ನಿನ್ನಯ ರೂಪನೀಕ್ಷಿಸಿ
ಹಲವು ಜಗ ಸಂತಾಪಪಡುತಿದೆ
ಸಲಹಿಕೊಳ್ಳೈ ಮೂಜಗವ ನೀ ನೆಂದನಾಪಾರ್ಥ ||

ಈ ಸಕಲಸುರನಿಕರ ನಿನ್ನಯ
ಭಾಸುರಶ್ರೀಮೂರ್ತಿಯಲ್ಲಿ ಪ್ರ
ವೇಶಿಸುತಲಿದೆ ಕೆಲವರು ಭಯದಿಂದ ಮುಗಿದಕೈಯುವರು |
ಈಶ ಬಿನ್ನೈಸುತ್ತಲಿಹರು ಮು
ನೀಶಸಿದ್ಧರು ಸ್ವಸ್ತಿಯೆಂದು ಮ
ಹಾಸದರ್ಥಸ್ತುತಿಯ ಮಾಡುತ್ತಿಹರು ನೋಡೆಂದ ||

ನಿಂದು ರುದ್ರಾದಿತ್ಯವಸುಗಳು
ಮುಂದೆ ಸಾಧ್ಯಮರುದ್ಗಣಂಗಳು
ಸಂದವಿಶ್ವೇದೇವರಶ್ವಿನಿದೇವರುಷ್ಣಪರು |
ಕುಂದದಾಗಂಧರ್ವಯಕ್ಷರು
ಬಂದು ರಾಕ್ಷಸರಖಿಲಸಿದ್ಧರು
ಮಿಂದು ನೆರೆ ಬೆರಗಾಗಿ ನಿನ್ನನು ನೋಡುತಿಹರೆಂದ ||

ಹಲವುಮುಖ ಹಲವಕ್ಷಿ ತೋಳ್ಗಳು
ಹಲವುತೊಡೆ ಹಲವಂಘ್ರಿಯುದರವು
ಹಲವುದಾಡೆಗಳಿಂದ ಭೀಕರವಾಗಿ ತೋರುತಿಹ |
ಬಲಿದ ನಿನ್ನೀ ಸ್ಥೂಲರೂಪಿನ
ನಿಲವನೀಕ್ಷಿಸುತಖಿಲಲೋಕವು
ಕೊಲಬುಗೆಡುವಂದದಲಿ ನಾ ಹೊಲಬಳಿದೆ ನೋಡೆಂದ ||

ನಭವನಳ್ಳಿರಿಯುತ್ತ ಬೆಳಗುತ
ವಿಭವದಿಂದಿಹ ಹಲವುವರ್ಣ
ಪ್ರಭೆಯುಧರಿಸಿದ ತೆಗೆದವದನದ ದೀಪ್ತಲೋಚನದ |
ಪ್ರಭುವೆ ನಿನ್ನನು ಕಂಡು ಮನದಲಿ
ರಭಸಗುಂದಿದ ನೈ ಧೃತಿಯುನಾ
ನಭಯುಸುಖವನು ಪಡೆಯುದಿಹೆ ನಲಿವಿಭುವೆ ಕೇಳೆಂದ ||

ಪ್ರಳಯಕಾಲಾನಲನ ಹೋಲುವ
ಹೊಳೆವ ದಾಡೆಗಳಿಂದ ಭುವನಕೆ
ಸಲೆ ಭಯಂಕರವಾದ ನಿನ್ನ ಮುಖಂಗಳನು ನೋಡಿ |
ಹೊಲಬನರಿಯೆನು ಸುಖವ ಪಡೆಯುನು
ಹಲವುದೇವರ ದೇವ ಲೋಕಕೆ
ನೆಲೆಯೆನಿಸಿದಚ್ಯುತನೆ ನೀನು ಪ್ರಸನ್ನನಾಗೆಂದ ||

ಇದಿರಲಿದೆ ಧೃತರಾಷ್ಟ್ರನಂದನ
ರದುಭುತದ ನೃಪರುಗಳು ಭೀಷ್ಮನು
ಕದನಗಲಿಯಹ ದ್ರೋಣ ಸೂರ್ಯಸುತಾದಿಪಟುಭಟರು |
ಒದವಿ ತೋರುವ ನಮ್ಮ ಬಲದ
ಗ್ಗದ ನೃಪಾಲರು ಸಹಿತ ನಿನ್ನಯ
ವದನಸಮ್ಮುಖಕೈದಿ ಬಂದರು ದೇವ ಕೇಳೆಂದ

ತವಕಿಸುತಭೂಮಿಪಾಲರು
ಧವಳದಾಡೆಗಳಿಂ ಭಯವಮಾ
ಡುವ ವಿಶಾಲದ ನಿನ್ನ ವದನದ ಕುಹರದೊಳು ಹೊಗಲು |
ಅವರೊಳಗೆ ಕೆಲಕೆಲರು ಹಲ್ಲಿನ
ವಿವರದಲಿ ಸೆರ ಸಿಕ್ಕಿ ತಲೆಯೊಡೆ
ದವರು ಜೋಲುತಲಿಹುದ ಕಂಡತಿಭೀತಿಯಾಯ್ತೆಂದ ||

ಹಲವುತೆರದ ನದೀನದಂಗಳ
ಉಲಿಯುತಿರ್ಪ ಜಲಪ್ರವಾಹವು
ನೆಲೆಯೆನಿಸಿದ ಸಮುದ್ರಕಭಿಮುಖವಾಗಿ ಪೋಪಂತೆ |
ಬಲುಭುಜದ ನರಲೋಕವೀರರು
ಜ್ವಲಿಸುತಿರುತಿಹ ನಿನ್ನ ವದನ
ಪೊಳಲ ಹೊಗುತಿರ್ದಪರು ಹೊಸತಿದು ದೇವ ಕೇಳೆಂದ ||

ಉರಿಯು ಕಿಚ್ಚ ಪತಂಗಜಾತಿಯು
ನೆರವಿ ತಮ್ಮ ವಿನಾಶಕೋಸುಗ
ಭರದಿ ಹೋಗುವಂದದಲಿ ಲೋಕವು ಮಡಿಯುಲೋಸುಗರ |
ಹರಿಯೆ ನಿನ್ನ ಮುಖಂಗಳನು ಬಂ
ದುರವಣಿಸಿ ಸೆರೆ ಹೋಗುತಲಿದೆ ನಿ
ನ್ನಿಖವನರಿಯೆನು ಕರುಣಿಸೈ ಕಾರುಣ್ಯನಿಧಿಯೆಂದ ||

ಉರಿಯುತಿಹ ವಕ್ತ್ರಂಗಳಿಂದವೆ
ನೆರೆದಖಿಲ ಲೋಕಂಗಳನು ಮಿಗೆ
ಭರದಲೆಲ್ಲಾ ದೆಸೆಗಳನು ನೀನೆಕ್ಕಿ ನೋಡುತಿಹೆ |
ಹರಿವ ಕಾಂತಿಗಳೀಜಗಂಗಳ
ಪರೆದು ತೀವಿ ಸಮುಗ್ರಮುಗ್ರದ
ಉರುಹುತಿವೆ ನಾನೇನನೆಂಬೆನು ಹರಿಹರೀ ಎಂದ ||

ದೇವ ನಿನಗೆ ನಮೋನಮೋ ಉ
ಗ್ರಾವತಾರದ ರೂಪಿನೊಪ್ಪುವ
ದೇವ ನೀನಾರೆನಗೆ ಪೇಳು ಪ್ರಸನ್ನಮುಖನಾಗಿ |
ದೇವ ನಿನ್ನನು ದಿಟಕರಿಯೆ ನೀ
ನಾವನೆಂಬುದ ನಿನ್ನ ಕೆಲಸವ
ಭಾವಶುದ್ಧಿಯೊಳರಿಯಲಿಚ್ಛೈಸುವೆನು ನಾನೆಂದ ||

ಸ್ತುತಿಗೆ ತಾ ಹರಿಮೆಚ್ಚಿ ನುಡಿದನು
ಗತಿಯು ಕೇಳೈ ಪಾರ್ಥ ಲೋಕ
ಸ್ಥಿತಿಯು ಸಂಹರಿಸಲ್ಕೆ ಹೆಚ್ಚಿದ ಕಾಲನೈನಾನು ।
ಕ್ಷಿತಿಯೊಳೀಲೋಕಂಗಳನು ನೆರೆ
ಹತವಮಾಡಲು ಬಂದೆ ಸಮರ
ವ್ರತವ ನೀಕೈಕೊಳ್ಳೊಡೀ ನೃಪರುಳಿವರಲ್ಲೆಂದ ॥

ಅದುನಿಸುತ್ತಿದಿ ನೀಳು ಹಗೆಗಳ
ಕದನದೊಳು ನೆರೆ ಜಯಿಸಿ ಕೀರ್ತಿಯು
ಪದವ ಪಡೆ ಭೋಗಿಸು ಸಕಲಸಾಮ್ರಾಜ್ಯಸಂಪದವ ।
ಮೊದಲಲಿವರೆನ್ನಿಂದ ಹತರಿ
ನ್ನಿದಕೆ ನೀನು ನಿಮಿತ್ತಮಾತ್ರವು
ಹಮುಳದಿಂದಾಗೈ ಧನಂಜಯ ಎಂದನಸುರಾರಿ ॥

ದ್ರೋಣನನು ಭೀಷ್ಮನನು ಮೆರೆವೀ
ಕ್ಷೋಣಿಗೊಡೆಯುಜಯದ್ರಥನ ನೆರೆ
ಜಾಣನಹ ರವಿಸೂನು ಮೊದಲಾದಖಿಳವೀರರನು ।
ಮಾಣದೆನ್ನಿಂದಳಿದವರುಗಳ
ಕೇಣವಿಲ್ಲದೆ ಕೆಡಹು ರಣದಲಿ
ಹೂಣೆಹೊಕ್ಕಿರಿಯೆಲು ಗೆಲುವೆ ನೀಸಂಜಬೇಡೆಂದ ॥

ಮತ್ತೆ ಕೇಳ್ಧೃತರಾಷ್ಟ್ರ ಫಲುಗುಣ
ನಿತ್ತ ವರಕೇಶವನ ವಾಕ್ಯದ
ಬಿತ್ತರಂಗಳ ಕೇಳಿ ನಡುಗುತ್ತೆರಗಿ ಕೈಮುಗಿದು ।
ಮತ್ತೆ ಭಯದಿಂ ವಂದಿಸುತ ತಲೆ
ಗುತ್ತಿ ಗಂಟಲ ನೆರೆಬಿಗಿದು ಪುರು
ಷೋತ್ತಮನ ಹೊಗಳಿದನು ಸಾತ್ವಿಕಭಾವಭಕ್ತಿಯಲಿ ॥

ಮತಿಮೊದಲು ಸಕಲೇಂದ್ರಿಯಕೆ ನಿಜ
ಪತಿಯೆನಿಸುತಿಹ ನಿನ್ನ ವರಸಂ
ಸ್ತುತಿವೆನಿಸುತಿಹ ಕೀರ್ತಿಯಿಂ ಜಗ ತುಷ್ಟಿವಡುತಿಹುದು |
ಅತಿಹರುಷಮಂ ತಳೆದು ಭಕ್ತಿ
ವ್ರತರ ಸಿದ್ಧರ ನೆರವಿ ವಂದಿಸಿ
ನುತಿಸುತಿದೆ ರಾಕ್ಷಸರು ದೆಸೆಗೆಟ್ಟೋಡುತಿಹರೆಂದ ||

ದೇವದೇವ ನನಂತನೀಭುವ
ನಾವಳಿಗಳಾಧಾರ ಸದಸ
ದ್ಭಾವವಹಜಗ ನಿತ್ಯವಹ ಪರಬೊಮ್ಮ ನೀನಾಗಿ |
ಆವಿರಂಚುಂಗಾದಿಯೆನಿಸುವ
ದೇವ ನಿನಗೀ ಸಕಲಲೋಕವ
ದಾವಪರಿಯಿಂ ದೆರಗದಿರಬಹುದೆಂದನಾಪಾರ್ಥ ||

ಆದಿದೇವ ಪುರಾಣಪುರುಷನು
ವೇದವೇದ್ಯನು ಜಗಕೆ ಶಾಶ್ವತ
ವಾದ ನಿಧಿ ನೀ ಶಾಸ್ತ್ರತತ್ವವಿದಾತುಮನು ನೀನು |
ಸಾಧಿಸುವ ಪರವಸ್ತು ನಿನ್ನಿಂ
ದಾದಿಯಲಿ ಜಗ ರಚಿಸಿಕೊಳುತಿಹು
ದಾದರಿಸಿಕೊಳುತಿಹುದನಂತನೆ ಸಚ್ಚಿದಾತ್ಮಕನೇ ||

ಮಾರುತನು ಯಮನಗ್ನಿ ವರುಣನು
ದಾರಶಶಿ ಕಮಲಜನು ನೀನೇ
ಧೀರಪ್ರಪಿತಾಮಹನು ಸಕಲಚರಾಚರವು ನೀನೇ |
ಶೌರಿ ನಿನಗೆ ನಮೋನಮೋ ವಿ
ಸ್ತಾರದಿಂದವೆ ಮುರಳಿ ಸಾಸಿರ
ಬಾರಿ ಪುನರಪಿ ಯುಂ ನಮೋನಮ ಎಂದನಾ ಪಾರ್ಥ |

ಎಲೆಹರಿಯೆ ಕಡೆಯಿಲ್ಲದಿಹ ನಿ
ಶ್ಚಲಿತವೀರ್ಯನು ಬಹುಪರಾಕ್ರಮಿ
ಹಲವನೆಲ್ಲವ ವ್ಯಾಪಿಸುತಲಿಹೆ ಸರ್ವಮುಂ ನೀನೇ |
ಕೆಲಬಲಂಗಳ ಲಿದಿರಿನಲಿ ಮ
ತ್ತೊಲಿದು ಬೆಂಬಾಗದಲಖಿಳದೆಸೆ
ಗಳಲಿ ನಿನಗೆರಗುವೆನು ಸರ್ವಾತ್ಮಕನೆ ನಮ ಎಂದ ||

ಮಂಗಳಾತ್ಮಕ ನಿನ್ನ ಮಹಿಮೆಯ
ನಿಂಗಿತದಿ ನೆರೆಯರಿಯದೇ ನಾಂ
ಹಿಂಗದಿರುವಜ್ಞಾನದಿಂ ದತಿಮೋಹವಶದಿಂದ |
ಸಂಗಡಿಗ ನೀನೆಂದು ಬಗೆದು
ಲ್ಲಂಘಿಸುತ ಯಾದವನೆ ಕೃಷ್ಣನೆ
ಯ್ಯಂಗಸಖ ನೀನೆಂದುದನು ನೀಂ ಕ್ಷಮಿಸಬೇಕೆಂದ ||

ಆವುದೊಂದಪಹಾಸಕೋಸುಗ
ದೇವ ನೀ ನುಣುವಲ್ಲಿ ವಿಹರಿಪ
ತಾವಿನಲಿ ಕುಳ್ಳಿರ್ಪೆಡೆಯ ಲಾಶಯನದೆಡೆಗಳಲಿ |
ಭಾವನೆಂ ದೆಕ್ಕಟಿಯ ಲಂತುಟು
ದೇವ ನಿನ್ನಿದಿರಿನಲಿ ಹಲವನು
ನಾವು ನುಡಿದ ದುರುಕ್ತಿಗಳ ನೀಂ ಕ್ಷಮಿಸಬೇಕೆಂದ ||

ತಂದೆ ನೀನು ಚರಾಚರಂಗಳಿ
ಗಿಂದು ಲೋಕಕೆ ಪೂಜ್ಯಗುರು ವರ
ಬಂಧು ನೀ ತ್ರೈಲೋಕ್ಯದೊಳಗಪ್ರತಿಮನಹ ನಿನಗೆ |
ಇಂದು ಸಮನಿಲ್ಲಾಗಿ ನೆರೆ ನಿ
ನ್ನಿಂದಧಿಕನಿನ್ನಾವನುಂಟು ಮು
ಕುಂದ ನಿನ್ನಿಂ ಪಿರಿದು ಮತ್ತೊಂದಿಲ್ಲ ಕೇಳೆಂದ ||

ಅದುನಿಮಿತ್ತೀತನುವ ನಿನ್ನಯ
ಪದಕೆ ಬಾಗಿಸಿ ವಂದಿಸುತ ನಾ
ಮುದದಿ ಕ್ಷಮೆಗೊಂಬೆನು ನುತಿಗಳಿಗೆ ಪಾತ್ರನಹ ನಿನ್ನ |
ಸುದತಿಯುಪರಾಧವನು ಪತಿ ಪಿತ
ನುದಯಿಸಿದ ಪುತ್ರನಲಿ ಕೊರತೆಯು
ಏದಿತದಿಂ ಸಖಿ ಸಖನ ರಕ್ಷಿಸುವಂತೆ ಸಲಹೆನ್ನ ||

ಮುನ್ನ ಕಾಣದ ರೂಪ ಕಾಣುತ
ಧನ್ಯತನದಿಂ ತುಷ್ಟನಾದೆನು
ನನ್ನ ಮನ ಭಯದಿಂದ ಕಂಪಿಸುತಿದೆ ಮಹಾದ್ಭುತಕೆ |
ಎನ್ನೊಡನೆ ತಾನಾಡುತಿಹ ಸಂ
ಪನ್ನಮೂರ್ತಿಯು ತೋರಿಸೆನಗ ಪ್ರ
ಸನ್ನನಾಗೆಲೆದೇವ ದೇವೋತ್ತಮ ಜಗನ್ನಾಥ ||

ವರಕಿರೀಟವ ಗದೆಯು ಚಕ್ರವ
ಧರಿಸಿಕೊಂಡಿಹ ನಿನ್ನ ಮುನ್ನಿನ
ಪರಮಮೂರ್ತಿಯು ಕಾಣಲಿಚ್ಛೈಸುವೆನು ನೀನೆನಗೆ |
ಪಿರಿದು ಸಾವಿರಬಾಹುಗಳ ಮುರ
ಹರನೆ ನಾಲುಕುಭುಜದಲೊಪ್ಪುವ
ಗರುವ ಮೂರ್ತಿಯು ತೋರಿಸೆಂದನು ಪಾರ್ಥ ಕೈಮುಗಿದು ||

ಹರಿ ನುಡಿದನರ್ಜುನಗೆ ಕೇಳೈ
ನಿರುತದಿಂ ನೀನಲ್ಲದನ್ಯರು
ಪಿರಿದು ಕಾಣರನಂತತೇಜೋಮಯಸನಾತನವ |
ಪಿರಿಯ ವಿಶ್ವಾಕೃತಿಯ ರೂಪವ
ಪರಮಯೋಗದ ಬಲದಿ ತೋರಿದೆ
ಕರುಣದಿಂ ದೀಪರಿಯುಲೆಲೆಕಲಿ ಪಾರ್ಥಕೇಳೆಂದ ||

ಈ ಪರಿಯ ವಿಶ್ವಾಕೃತಿಯು ವರ
ರೂಪ ಧರಿಸಿದ ನಾನು ದಿಟದಿಂ
ಪಾಪಮಿಶ್ರಿತಮರ್ತ್ಯರೊಳು ನಿನ್ನಿಂದಬೇರಾದ |
ಕಾಪುರುಷರಿಗೆ ವೇದಪಾಠಕ
ಲಾಪ ಯಜ್ಞಕ್ರಿಯೆ ತಪವು ಬಹು
ರೂಪದಾನಂಗಳಲಿ ಭಜಿಸಲು ಬಾರೆನಾನೆಂದ ||

ಎಲೆಧನಂಜಯ ಈತೆರದಲಿಹ
ಸಲೆಭಯಂಕರರೂಪನೀಕ್ಷಿಸಿ
ಯಳುಕದಿರು ಮತಿಗುಂದದಿರು ನೀ ಮುನ್ನ ಕಂಡರಿದ |
ಲಲಿತದೆನ್ನಯ ರೂಪ ನಂಜದೆ
ನಲಿದು ನೋಡೆಂದೆನುತ ಮುರರಿಪು
ಚಲುವ ಮುನ್ನಿನ ರೂಪ ಧರಿಸಿದನರಸ ಕೇಳೆಂದ ||

ಕೇಳು ಧೃತರಾಷ್ಟ್ರಾವನಿಪ ಹರಿ
ಹೇಳಿದನು ಫಲುಗುಣನೊಡನೆ ಸಂ
ಮೇಳದಿಂದೀಪರಿ ನುಡಿದು ನೆರೆ ಚೆಲುವಿಕೆಯನಾಂತ |
ಆಲಲಿತಮೂರ್ತಿಯನು ಧರಿಸಿದ ದ
ಯಾಳು ತನ್ನಯ ರೂಪ ತೋರಿಸಿ
ಬೋಳವಿಸಿದನು ಬೆದರುವರ್ಜುನನನು ಕರುಣದಿಂದ ||

ಬಳಿಕ ನರನಿಂತೆಂದ ಲಕ್ಷ್ಮೀ
ನಿಳಯ ಕೇಳೈ ನಿನ್ನ ಮಾನುಷ
ಚೆಲುವ ರೂಪನು ಕಂಡು ಮಗುಳೆಚ್ಚರು ಜನಿಸಿತೆನಗೆ |
ತಿಳಿದುದಂತಃಕರಣ ಚಿತ್ತವು
ನೆಲೆಗೆ ನಿಂದಿಹುದೆನ್ನ ಪ್ರಕೃತಿಯ
ಹೊಲಬನೈದಿದೆ ನೀಗನಾನೆಲೆ ಕೃಷ್ಣ ಕೇಳೆಂದ ||

## ಏಕಾದಶಾಧ್ಯಾಯಂ.

ಎಲೆಧನಂಜಯ ಉಳಿದ ನರರಿಗೆ
ನೆಲೆಗೆ ಕಾಣಲು ಶಕ್ಯವಲ್ಲದ
ಬಲಿದ ರೂಪನು ಧರಿಸಿಕೊಂಡಿರ್ದೆನ್ನ ಮೂರ್ತಿಯನು |
ಒಲವಿನಿಂದೀಕ್ಷಿಸಿದೆ ಯಾವುದ
ಹಲವು ದೇವರು ನಿತ್ಯವಾಗಿದ
ನೊಲವಿನಿಂ ದೀಕ್ಷಿಸಲು ಬಯಸುವರೆಂದನಸುರಾರಿ ||

ಶ್ರುತಿಗಳಿಂದ ತಪಂಗಳಿಂ ಕೇ
ಳತಿಶಯಿತದಾನಂಗಳಿಂದಂ
ಕ್ರತುಗಳಿಂ ಸಂಪನ್ನರೆನಿಸಿದ ಸಕಲಮಾನವರು |
ಅತಿಭಯಂಕರ ವಿಶ್ವಮೂರ್ತಿಯ
ಗತಿಯನುಳ್ಳೆನ್ನುವಸು ನೀ ಸ
ಮ್ಮತದಲೀಕ್ಷಿಸಿದಂತೆ ಕಾಣರು ಪಾರ್ಥ ಕೇಳೆಂದ ||

ಎಲೆ ಧನಂಜಯ ವಿಶ್ವಮಯವಹ
ನೆಲೆಯ ರೂಪಿನ ನಾನು ಪರರಿಗೆ
ಚಲಿಸ ದೇಕಾಗ್ರತೆಯಲಿರುತಿಹ ನಿಜಭಕುತಿಯಿಂದ |
ಹೊಲಬಿನಿಂ ದರಿಯಲುಬಹೆನು ನಿ
ರ್ಮಲತೆಯಿಂ ಕಾಣಲುಬಹೆನು ನಿಜ
ನೆಲೆಯ ಕೂಡಲುವಶವಹೆನು ಕೇಳೆಂದನಸುರಾರಿ ||

ಸಂಗವನು ಬಿಟ್ಟಖಿಳಸತ್ಕ
ರ್ಮಂಗಳನು ನನಗರ್ಪಿಸುವ ಫಲ
ಸಂಗವರ್ಜಿತ ಭಕ್ತಿಯುಕ್ತನು ಮತ್ಪರಾಯಣನು |
ಹಿಂಗದೆನ್ನೊಳ ಗಿರ್ಪಖಿಳಭೂ
ತಂಗಳಲಿ ನಿರ್ವೈರಿಯಾದವ
ನಂಗ ಕೇಳ್ಳೆ ಯೆನ್ನ ನೈದುವ ನೆಂದನಸುರಾರಿ ||

— ಇಂತು ವಿಶ್ವರೂಪಪ್ರದರ್ಶನವೆಂಬ ಏಕಾದಶಾಧ್ಯಾಯಂ ಸಂಪೂರ್ಣಂ —

# ದ್ವಾದಶಾಧ್ಯಾಯಂ

ಸೂಚನೆ || ಜ್ಞಾನಸಾಧನ ಭಕ್ತಿಯೋಗವು
ತಾನಧಿಕ ಕೇಳೆಲೆಧನಂಜಯ
ಮಾನವರುಗಳಿಗೆಂದು ಲಕ್ಷ್ಮೀಕಾಂತ ಬೋಧಿಸಿದ ||

ಆರು ಕೆಲರೀವಿಶ್ವರೂಪವ
ಸಾರದಿಂ ಭಜಿಸುವರು ಮತ್ತಿ
ನ್ನಾರು ಕೆಲರವ್ಯಕ್ತವೆನಿಸುವ ನಿನ್ನ ನಿಜಪದವ |
ಸೇರಿ ಭಜಿಸುವ ರುಭಯರೊಳು ಸಂ
ಸಾರಶರಧಿಯ ಬೇಗ ದಾಂಟುವ
ಧೀರಯೋಗಿಗ ಳಾರೆನಗೆ ಹೇಳೆಂದನಾ ಪಾರ್ಥ ||

ಹರಿ ನುಡಿದನೆನ್ನಲ್ಲಿ ಚಿತ್ತವ
ನಿರಿಸಿ ವಿಶ್ವಾಸವನು ತಳೆದಿಹ
ನರರೊಳುತ್ತಮ ರಾರುಕೆಲರು ವಿಚಾರಪರರಾಗಿ |
ನಿರುತದಿಂ ದನವರತ ಭಜಿಪರು
ಪುರುಷರವ ರತ್ಯಧಿಕರೆಂದೇ
ಹರುಷದಿಂದರಿಯೆನ್ನ ಮತವಿದು ಪಾರ್ಥ ಕೇಳೆಂದ ||

ಆರುಕೆಲಬ ರಚಿಂತ್ಯ ಸರ್ವಗ
ಸಾರತರಕೂಟಸ್ಥ ಚಲಿಸದ
ಸ್ಥಾರಧ್ರುವ ವವ್ಯಕ್ತ ವಜ್ಞತೆದೂರವನಿಸಿರ್ಪ |
ಚಾರುತರ ಪರಬೊಮ್ಮವನು ಮನ
ವಾರೆ ಭಜಿಸುವ ರವರು ನೆರೆ ಸಂ
ಸಾರವ ನನಾಯಾಸದಲಿ ದಾಂಟುವರು ಕೇಳೆಂದ ||

## ದ್ವಾದಶಾಧ್ಯಾಯಂ

ಇಂದ್ರಿಯಂಗಳ ನೆಲ್ಲವನುಮುದ
ದಿಂದ ನಿಯಮಿಸಿ ಸಕಲಭೂತದೊ
ಳೊಂದು ಬುದ್ಧಿಯನುಳ್ಳವರು ಸಚರಾಚರಂಗಳಲಿ |
ಕುಂದದೆಂದುಂ ಹಿತವನೇ
ಸಲಿಂದ ಲಾಚರಿಸುವರು ತಾವಾ
ನಂದರೂಪಿನ ಲೆನ್ನ ಸೈದುವರೆಂದನಸುರಾರಿ ||

ಕಾಣಬಾರದ ಬೊಮ್ಮವನು ನೆರೆ
ಕಾಣಬೇಕೆಂಬೆಂಬ ಮನದಾ
ಪ್ರಾಣಿಗಳಿಗಾಯಾಸ ತಾನತ್ಯಧಿಕವಾಗಿಹುದು |
ಮಾಣ ದೀದೇಹಾಭಿಮಾನದ
ಕಾಣಿಕೆಯನುಳ್ಳರ್ಗೆ ಬೊಮ್ಮದ
ಕಾಣಿಕೆಯು ದುರ್ಲಭ ಕಣಾ ಕಲಿಪಾರ್ಥ ಕೇಳೆಂದ ||

ಸರ್ವಕರ್ಮಂಗಳ ಸಮರ್ಪಿಸಿ
ಸರ್ವಥಾ ಕೇಳಾರು ಕೆಲಬರು
ಸರ್ವಭಾವದೊ ಳೆನ್ನೊ ಳೈಕ್ಯಾಸಕ್ತರಾಗಿಹರು |
ಉರ್ವಿಯೊಳ ಗೇಕಾಗ್ರಚಿತ್ತದಿ
ಸರ್ವಗತನಾ ದೆನ್ನ ನೆನೆಯುತ
ಸರ್ವದಾ ಭಜಿಸುವ ರವರ ರಕ್ಷಿಸುವೆನಾನೆಂದ ||

ಎನ್ನೊ ಳಿರಿಸಿದ ಮನವನುಳ್ಳ ನಿ
ಜೋನ್ನತರ ಭಕ್ತರನು ಮೃತ್ಯು ಭ
ಯೋನ್ನತದ ಸಂಸಾರಘನಸಾಗರದ ದೆಸೆಯಿಂದ |
ಸನ್ನಿಹಿತವಾಗಿರ್ಪಸುಖದಿಂ
ದನ್ಯಭಾವವ ಬಿಡಿಸಿ ಕೃಪೆಯಿಂ
ಮನ್ನಿಸುತ ಲತಿವೇಗದಿಂದಾಂಟಿಸುವೆ ಕೇಳೆಂದ ||

ನಿನ್ನ ಚಿತ್ತವ ನೆನ್ನೊಳರ್ಪಿಸು
ನಿನ್ನ ಬುದ್ಧಿಯೊಳೆನ್ನನೇ ಸೆರೆ
ಸನ್ನಿಹಿತವಾಗಿರಿಸುತೀಪರಿ ಮಾಡುತಿರೆ ಬಳಿಕ |
ಅನ್ಯಭಾವವನುಳಿದುಳಿದು ನೀ
ನೆನ್ನೊಳೈಕ್ಯವ ಪಡೆದು ವರಸ
ಚ್ಚಿನ್ಮಯಾತ್ಮನ ಪದವನೈದುವೆ ಪಾರ್ಥ ಕೇಳೆಂದ ||

ಈ ಪರಿಯಲೆನ್ನಲ್ಲಿ ಮನವ ನಿ
ರೂಪದಿಂ ಸ್ಥಿರವಾಗಿ ನಿಲಿಸ
ಲ್ಕಾಪನೀನಾಗದೊಡದರಿ ನಿವ್ಮೇಲೆ ಸಾಧನೆಯ |
ದೀಪಿಸುವ ಅಭ್ಯಾಸಯೋಗದಿ
ನಾಪರಮನೆನಿಪೆನ್ನ ನಿಜಚಿ
ದ್ರೂಪವನು ಪಡೆಯಲ್ಕೆ ಬಯಕೆಯ ಮಾಡುನೀನೆಂದ ||

ಪರಮವೆನಿಪಭ್ಯಾಸಯೋಗದಿ
ಚರಿಸಲಾರದೊಡೆನ್ನ ಭಾವದ
ಪರಿಚರಿಯಸತ್ಕರ್ಮದೊಳಗಾಸಕ್ತಿಯುತನಾಗು |
ಭರದಲೀಕರ್ಮಂಗಳನು ಮ
ತ್ಪರವೆನಿಸಿ ಮಾಡುತ್ತಿರಲು ನೀಂ
ಪರಮಸಿದ್ಧಿಯ ಪಡೆವೆಯೈ ಕಲಿಪಾರ್ಥ ಕೇಳೆಂದ ||

ಎನ್ನಯೋಗವನಾಶ್ರಯಿಸಿ ನೀ
ನುನ್ನತದ ಸತ್ಕರ್ಮವನು ಸಂ
ಪನ್ನನಾಗಿಯೆ ಮಾಡುವಲ್ಲಿ ಸಮರ್ಥನೆನಿಸಿದೊಡೆ |
ನಿನ್ನ ಚಿತ್ತವ ನೀ ನಿಯಾಮಿಸಿ
ಯಿನ್ನಖಿಳಕರ್ಮದ ಫಲಂಗಳ
ನೆನ್ನೊಳರ್ಪಿಸು ಪರಮಪದವಿಯ ಪಡೆವೆ ಕೇಳೆಂದ ||

ಲೇಸಲಾಲೋಕದೊಳು ಕರ್ಮಾ
ಭ್ಯಾಸದಿಂ ಸುಜ್ಞಾನದರಿಂ
ಲೇಸೆನಿಸುವುದು ಧ್ಯಾನ ಕೇಳಾಧ್ಯಾನದಿಂ ಬಳಿಕ |
ಆಸಕಲ ಕರ್ಮದ ಫಲಂಗಳ
ನಾಸೆಯಿಲ್ಲದೆ ಬಿಡುವು ದಣಿಯುರ
ಲೇಸು ಮತ್ತದರಿಂದ ಲುತ್ತಮಶಾಂತಿ ಕೇಳೆಂದ ||

ಈ ಸಕಲಭೂತಂಗಳನು ಬಯು
ಲಾಸೆಯಿಂ ದ್ವೇಷಿಸದೆ ಪ್ರಾಣಿಗ
ಳೈಸರಲಿ ಮಿತ್ರತ್ವ ಕರುಣಾ ಕ್ಷಮೆಗಳುಳ್ಳವರು |
ಆಸುಖಂಗಳೊ ಳಖಿಲ ದುಃಖದ
ಘಾಸಿಯೊಳು ಸಮವಾಗಹಂಕೃತಿ
ವಾಸನೆಗ ಳಳಿದುಳಿದವನೆ ವರಯೋಗಿ ಕೇಳೆಂದ ||

ಹುಟ್ಟಿದನಿತೇ ಲಾಭದಲಿ ಸಂ
ತುಷ್ಟನನುದಿನ ಯೋಗದಲಿ ವರ
ನಿಷ್ಠೆಯುಳ್ಳವ ನಿಯತಚಿತ್ತನು ನಿಶ್ಚಯಾತ್ಮಕನು |
ಇಷ್ಟದಿಂ ಮನಬುದ್ಧಿಗಳ ತಾ
ನೆಟ್ಟನೆನ್ನೊಳೆ ನಿಲಿಸಿದವನೇ
ಸೃಷ್ಟಿಯೊಳು ಮದ್ಭಕ್ತನೆನಗತಿ ಪ್ರಿಯನು ಕೇಳೆಂದ ||

ಆವನಿಂದೀಜಗ ಬೆದರದಿಹು
ದಾವ ನಾ ಈಜಗದ ದೆಸೆಯಿಂ
ಭಾವಿಸಲು ತಾಬೆದರ ಹರ್ಷಾಮರ್ಷಭೀತಿಗಳಿಂ |
ಆವನೊಬ್ಬನು ಮುಕ್ತನಾಗಿಹ
ಪಾವನನು ಕೇಳಾತನೇ ನಿಜ
ಭಾವದಿಂದಹ ನೆನಗತಿಪ್ರಿಯ ನೆಂದನಸುರಾರಿ ||

ವಿಷಯದಭಿಲಾಷೆಯನು ಬಿಟ್ಟವ
ನೆಸೆವ ಶುಚಿಯೋಗದಲಿ ದಕ್ಷನು
ಮಿಸುಪ ಭೋಗಂಗಳಲುದಾಸೀನನು ಗತವ್ಯಥನು |
ವಸುಧೆಯೊಳ ಗಿಹಪರದ ಭೋಗವ
ನೆಸಗುವಖಿಳಾರಂಭಹೀನನು
ಕುಶಲನಾವನ ನವನತಿ ಪ್ರಿಯಭಕ್ತನೆಸಗೆಂದ ||

ಆವನೊಬ್ಬನು ಲೇಸುಹೊಲ್ಲೆಹ
ಠಾವಿನಲಿ ಹರುಷಿಸನು ದ್ವೇಷಿಸ
ನಾವಿನುತಭೋಗವ ಬಯಸ ದುಃಖಿಸನು ಕೇಡಿನಲಿ |
ಭಾವಿಸಲ್ಕೆ ಶುಭಾಶುಭಂಗಳ
ತಾ ವಿವೇಕದಿ ಬಿಟ್ಟು ಭಕ್ತಿಯು
ಳಾಪದಿಂ ಭಜಿಸುವನು ಕೇಳವ ನೆನಗತಿಪ್ರಿಯನು ||

ಹಗೆಕೆಳೆಯರಲಿ ಮನ್ನಣೆಗಳಲಿ
ಮಿಗಿಲೆನಿಸು ವವಮಾನದಲಿ ತಾ
ನೊಗೆವ ಶೀತೋಷ್ಣಂಗಳಲಿ ಸುಖದುಃಖದೆಡೆಗಳಲಿ |
ನಗುನಗುತ ಸಮನಾಗಿ ಸಂಗವ
ಬಗೆಗೆ ಬಿಟ್ಟಿಹ ನಾವನವನೀ
ಜಗದೊ ಳುತ್ತಮಭಕ್ತನೆನಗೆಲೆ ಪಾರ್ಥ ಕೇಳೆಂದ ||

ಸ್ತುತಿಯಲತಿನಿಂದೆಯಲಿ ಸಮ ಸು
ವ್ರತದ ಮೌನವನುಳ್ಳ ದೊರಕಿದ
ನಿತನು ಕೈಕೊಂಡೈಸರಲಿ ಸಂತುಷ್ಟನಾಗಿಹನು |
ಸತತ ಗೃಹವನು ಬಿಟ್ಟು ಸುಸ್ಥಿರ
ಮತಿಯನುಳ್ಳಾ ಭಕ್ತಿಯುತನವ
ನತಿಮಹಾಪ್ರಿಯನೆನಗೆ ಕುಂತೀಸುತನೆ ಕೇಳೆಂದ ||

ದ್ವಾದಶಾಧ್ಯಾಯಂ.

ಆರು ಕೆಲ ರೀಧರ್ಮಮೋಕ್ಷದ
ಸಾರವನು ನಾಹೇಳಿದುದ ವಿ
ಸ್ತಾರದಿಂ ಭಜಿಸುತ್ತಿಹರು ವರಶಾಸ್ತ್ರಮಾರ್ಗದಲಿ |
ವೀರ ಕೇಳ್ವಿಶ್ವಾಸಯುಕ್ತರು
ದಾರರೆನಿಸುವ ಮತ್ಪರಾಯಣ
ಧೀರಭಕ್ತರು ನನಗತಿಪ್ರಿಯರೆಂದನಸುರಾರಿ ||

— ಇಂತು ಭಕ್ತಿಯೋಗಮೆಂಬ ದ್ವಾದಶಾಧ್ಯಾಯಂ ಸಂಪೂರ್ಣಂ —

# ತ್ರಯೋದಶಾಧ್ಯಾಯಂ

ಸೂಚನೆ || ತನುವೆನಿಪ ಕ್ಷೇತ್ರವನು ಕ್ಷೇತ್ರ
ಜ್ಞನನು ಜ್ಞೇಯಪ್ರಕೃತಿ ಪುರುಷರ
ನನಿತುವನು ಸಂಕ್ಷೇಪದಿಂ ದ್ಪರ್ಜುನಗೆ ಹರಿ ನುಡಿದ ||

ತನುವಿದೇ ತಾಂ ಕ್ಷೇತ್ರವೆನಿಸುವು
ದನುನಯದಿ ಕೌಂತೇಯ ಕೇಳೀ
ತನುವನಾವವ ಬಲ್ಲ ನವ ಕ್ಷೇತ್ರಜ್ಞನೆನಿಸುವನು |
ತನುವಿನಭಿಮಾನಿಯನು ತನುವನು
ಘನತರಶ್ರುತಿಯಿಂದರಿದ ವರ
ಮುನಿಗಳೀ ಪೇಳುವರು ತಿಳಿ ನೀ ನೆಂದನಸುರಾರಿ ||

ಸಕಲಕ್ಷೇತ್ರಂಗಳಲಿ ನೆರೆ ಸು
ವ್ಯಕುತನಹ ಕ್ಷೇತ್ರಜ್ಞನನು ಸದು
ಯುಕುತಿಯಿಂ ನಾನೆಂದು ತಿಳಿ ಯಿದೇಹದೇಹಿಗಳ |
ಪ್ರಕಟವಾಗರಿದಿರ್ಪಿರವೆ ತಾ
ಮುಕುತಿಕರ ಸುಜ್ಞಾನವೆಂದೇ
ನಿಖಿಳ ಶಾಸ್ತ್ರದೊಳೆನ್ನ ಮತವೆಲೆಪಾರ್ಥ ಕೇಳೆಂದ ||

ಈಶರೀರ ವದಾವುದೆಂತಹು
ದೇಸು ತತ್ವವಿಕಾರವುಳ್ಳುದು
ನಾಶವೈದುವು ದಾವಕಾರಣದಿಂದ ಉದಯಿಸಿತು |
ಆಶರೀರಿ ಯದೇಸುಶಕ್ತಿ ವಿ
ಲಾಸನೆನಿಸುವ ನೆಂಬಿನಿತ ಸುಸ
ಮಾಸದಿಂದೆನ್ನಿಂದ ತಿಳಿ ನೀನೆಂದನಸುರಾರಿ ||

ತ್ರಯೋದಶಾಧ್ಯಾಯಂ.

ಋಷಿಗಳಿಂದವೆ ಹಲವುಪರಿಯಲಿ
ವಸುಧೆಯೊಳು ನಾನಾತೆರದಿ ಬಂ
ದೆಸೆವ ವರವೇದಂಗಳಿಂ ನೆರೆ ಬೇರೆಬೇರಾಗಿ |
ಸಸಿನೆ ನಿಶ್ಚಿತವೆನಿಸುತಿಹ ನಿಜ
ನಿಶಿತಯುಕ್ತಿಯನುಳ್ಳ ಸೂತ್ರ
ಪ್ರಸರದಿಂ ದಾಬೊಮ್ಮ ಹೇಳಿಸಿ ಕೊಳುತಲಿಹ ದೆಂದ ||

ಈಮಹಾಭೂತಂಗ ಳೀನಿ
ಸ್ಸೀಮವೆನಿಸಿದ ಹಮ್ಮು ಬುದ್ಧಿಯು
ತಾಮಸದ ಅವ್ಯಕ್ತನೆರದೇಕಾದಶೇಂದ್ರಿಯವು |
ಕಾಮರಾಗಾದಿಗಳಿಗತಿಸು
ಪ್ರೇಮದಿಂ ಕಾರಣವೆನಿಪ ಗುಣ
ನಾಮಶಬ್ದಾದಿಗಳ ಪಂಚಕ ವಿನಿತುತೋರುವುವು ||

ವಿದಿತಕಾಮ ಕ್ರೋಧ ಸುಖಮುಂ
ತದರನಂತರ ದುಃಖ ಚಿತ್ತದ
ಪದದರಿವು ಧೃತಿ ಯಿನಿತು ವಾ ಭೂತಾದಿಸಮುದಾಯ |
ಮುದದಿ ತಮ್ಮಧಿಕಾರಸಹಿತಿರ
ಲದು ಸಮಾಸದಿ ಕ್ಷೇತ್ರವೆಂದೇ
ವಿದುಗಳಿಂ ಹೇಳಿಸಿಕೊಳುತಲಿಹು ದೆಂದನಸುರಾರಿ ||

ಮಾನವಿಲ್ಲದೆ ಡಂಭವಿಲ್ಲದೆ
ತಾನಿರುವ ಪ್ರಾಣಿಗಳ ಹಿಂಸೆ ನಿ
ಧಾನಿಸಲ್ಕಿಲ್ಲದೆಯಿರುವ ಸೈರಣೆಯು ರುಜುತನವು |
ಜ್ಞಾನದಿಂ ಗುರುಸೇವೆ ಶುಚಿತನ
ಧ್ಯಾನದಲಿ ಸುಸ್ಥಿರತೆ ಚಿತ್ತ
ಸ್ಥಾನನಿಗ್ರಹ ವಿನಿತು ತತ್ವಜ್ಞಾನಸಾಧನವು ||

ಉರವಣಿಪ ಶಬ್ದಾದಿವಿಷಯದ
ನೆರವಿಯಲಿ ವೈರಾಗ್ಯ ತೋರುವ
ಸರಿರದಲಿ ನಿರಹಂತೆ ಜನನವು ಮರಣ ವಾರ್ಧಕವು |
ಹುರುಳುಗೆಡಿಸುವ ವ್ಯಾಧಿ ದುಃಖದ
ನೆರವಿ ಮೊದಲಹ ದೋಷದರ್ಶನ
ವಿರತಿ ತತ್ವಜ್ಞಾನ ಸಾಧನ ವೆಂದನಸುರಾರಿ ||

ಪುತ್ರದಾರ ಗೃಹಾದಿವಿವಿಧವಿ
ಚಿತ್ರವಿಷಯಂಗಳಲಿ ತೋರ್ಪಗು
ಣತ್ರಯದಲುದಯಿಸುವ ಸ್ಪೃಹೆ ಯಾಸಕ್ತಿ ಯುಳಿದಿರಲು |
ನಿತ್ಯಮಿಷ್ಟಾನಿಷ್ಟ ದುಭಯೋ
ತ್ಪತ್ತಿಯಲಿ ಸಮಚಿತ್ತನಾಗಿಹು
ಘುತ್ತಮೋತ್ತಮಜ್ಞಾನ ಸಾಧನ ವೆಂದನಸುರಾರಿ ||

ಎನ್ನಲೇಕಾತ್ಮಕವೆನಿಪ ಸಂ
ಪನ್ನಯೋಗದಿ ಕವಲುವೋಗದೆ
ಯುನ್ನತೋನ್ನತಭಕ್ತಿಯೇಕಾಂತವನು ಸೇವಿಸುತ |
ಮನ್ನಿಸುವ ಸಭೆಗಳನು ತ್ಯಜಿಸುತ
ಸನ್ನಿಹಿತಸರ್ವಾತ್ಮಭಾವವು
ಘುನ್ನ ಹೇಳಿದ ವಿನಿತು ಜ್ಞಾನೋಪಾಯ ಕೇಳೆಂದ

ನಿರುತದಿಂ ದಧ್ಯಾತ್ಮವಿದ್ಯಾ
ಭರವು ವರತತ್ವಾರ್ಥದರ್ಶನ
ಪರಿಕಿಸಲು ತಾನಿನಿತು ಸಮ್ಯಗ್ಜ್ಞಾನಸಾಧನವು |
ಭರದಿ ಕೇಳಿದರಿಂದಲನ್ಯವು
ಪಿರಿಯರಿಂ ದಜ್ಞಾನವೆನಿಸುಗು
ವರನೆ ತಿಳಿ ನೀನೆಂದನಾಮುರವೈರಿ ಕರುಣದಲಿ ||

త్రయోదశాధ్యాయం

ಆವುದೊಂದನು ತಿಳಿಯಲದರಿಂ
ಪಾವನನು ಮೋಕ್ಷವನು ಪೊರ್ದುವ
ನಾವಿಶೇಷಜ್ಞಾನವನು ನಿನಗೊರೆವೆನೊಲವಿನಲಿ |
ವ್ಯಾವಹಾರಿಕಸತ್ತ ಸತ್ತೆಂ
ದಾವಪರಿಯಿಂ ದೆನಿಸಿಕೊಳ್ಳದೆ
ಭಾವಿಸಲ್ಕೆ ಯನಾದಿಯೈ ಪರಬೊಮ್ಮ ಕೇಳೆಂದ ||

ವಿಶ್ವತಶ್ಶಿರ ವಿಶ್ವತೋಮುಖ
ವಿಶ್ವತೋವರನಯನ ಶ್ರುತಿಯುತ
ವಿಶ್ವತಃಕರ ವಿಶ್ವತೋಬಹುಪಾದವೆನಿಸಿರ್ಪ |
ವಿಶ್ವಶಕ್ತಿಯ ರೂಪೆನಿಸುತಿಹ
ವಿಶ್ವಮಯ ಪರಬೊಮ್ಮ ಜಗದೊಳು
ವಿಶ್ವವನೆ ಆವರಿಸಿಹುದು ಕಲಿಪಾರ್ಥ ಕೇಳೆಂದ ||

ಹೊರಗೊಳಗಣೆಂದ್ರಿಯಗುಣಂಗಳ
ಪಿರಿದು ಬೆಳಗುತ್ತಿಹುದು ಬಳಿಕಲಿ
ಬೆರಗಿನಿಂ ಸಕಲೇಂದ್ರಿಯಂಗಳ ಬಿಟ್ಟು ತಾನಿಹುದು |
ಎರಕವಿಲ್ಲದೆ ಸಕಲಜಗವನು
ನಿರುಗೆಯಿಂ ಧರಿಸಿಹುದು ನಿರ್ಗುಣ
ಮೆರೆವ ಗುಣನಿಕರವನು ಭೋಗಿಸುತಿಹುದು ಕೇಳೆಂದ ||

ಮೆರೆವುದೊಳಹೊರಗೆನಿಸಿ ಜಗದೊಳ
ಗುರುವ ಭೂತಂಗಳಲಿ ಬೊಮ್ಮವು
ಬೆರೆಸಿನಿಂದ ಚರಾಚರವು ತಾನಾಗಿ ತೋರುವುದು |
ಮೆರೆದು ದೂರದಲಿಹುದು ಮತಿಯಿಂ
ದರಸಲಿಕೆ ಹತ್ತಿರೆಯಿಹುದು ನಿಜ
ನಿರುಗೆಯಿಂ ದತಿಸೂಕ್ಷ್ಮವಾಗಿಯೆ ತೋರುತಿಹುದೆಂದ ||

ಈಮಹಾಭೂತಂಗಳಲಿ ನಿ
ಸ್ಸೀಮ ಬೊಮ್ಮವು ಬೇರೆನಿಸಿ ತಾ
ನೇಮದಿಂದಿರುತಿರ್ದೊಡೆಯು ಬೆರಸಿಪ್ಪ ಚಂದದಲಿ |
ಪ್ರೇಮದಿಂ ತೋರುವುದು ಭೂತ
ಗ್ರಾಮ ಸೃಷ್ಟಿಸ್ಥಿತಿ ಲಯಂಗಳ
ಕಾಮಿಸದೆ ಮಾಡುತ್ತಲಿಹುದೆಲೆ ಪಾರ್ಥ ಕೇಳೆಂದ ||

ಜ್ಯೋತಿರೂಪುಗಳಿಂಗೆ ತಾನೇ
ಜ್ಯೋತಿಯೆನಿಸುತ್ತಿಹುದವಿದ್ಯಾ
ವ್ರಾತವೆನಿಪ ತಪಸ್ಸಿನಿಂ ದತಿದೂರವೆನಿಸುವುದು |
ಶ್ರಾತವಹ ಸುಜ್ಞಾನ ಜ್ಞೇಯವು
ನೀತಿಯಿಂ ಕೇಳ್ ಜ್ಞಾನಗಮ್ಯವು
ಭೂತನಿಚಯದ ಹೃದಯದಲಿ ನೆಲಸಿಹುದು ನಿಜವೆಂದ ||

ಇಂತು ತನುವೆನಿಸಿಪ್ಪ ಕ್ಷೇತ್ರವ
ಸಂತತದ ಸುಜ್ಞಾನವನು ನಿಜ
ದಿಂ ತಿಳಿವ ಜ್ಞೇಯವನು ಸಂಕ್ಷೇಪದಲಿ ಹೇಳಿದೆನು |
ಚಿಂತಿಸುತಲಿರ್ಪೆನ್ನ ಭಕ್ತನು
ಭ್ರಾಂತಿಯುಳಿದದ ನರಿಯಲೆನ್ನನ
ಚಿಂತ್ಯರೂಪನನೈದುವನು ಕಲಿ ಪಾರ್ಥ ಕೇಳೆಂದ ||

ಪ್ರಕೃತಿಪುರುಷ ರೆನಿಪ್ಪುಭಯವಂ
ಪ್ರಕಟವಾಗಿ ಯನಾದಿಯೆಂದರಿ
ವಿಕರಿಸುವ ಮಹಾದಿತತ್ವಂಗಳ ವಿಕಾರವನು |
ವ್ಯಕುತವಹ ಸತ್ವಾದಿಗುಣವನು
ಪ್ರಕೃತಿಯಿಂ ದುದಯಿಸುವುವೆಂದೇ
ಯುಕುತಿಯಿಂದರಿ ಯೆಲೆ ಧನಂಜಯ ಎಂದನಸುಧಾರಿ ||

## ತ್ರಯೋದಶಾಧ್ಯಾಯಂ.

ಕಾರಿಯಂಗಳಿ ಗಖಿಲಕರಣಕೆ
ಸಾರಕರ್ತೃತ್ವದಲಿ ನೆಟ್ಟನೆ
ಕಾರಣವು ಮೂಲಪ್ರಕೃತಿಯೆನಿಸುವುದು ಪರಿಕಿಸಲು |
ಸೇರುತಿಹ ಸುಖದುಃಖಗಳ ವಿ
ಸ್ತಾರಭೋಕ್ತೃತ್ವದಲಿ ನೆಟ್ಟನೆ
ಕಾರಣವು ತಾ ಪುರುಷನೆನಿಸುಗು ಪಾರ್ಥ ಕೇಳೆಂದ ||

ಆಪುರುಷ ಪ್ರಕೃತಿಯಲಿ ನಿಂದೇ
ವ್ಯಾಪರಿಸಿ ಪ್ರಕೃತಿಯಲೊಗೆದ ಬಹು
ರೂಪವಹ ಸತ್ವಾದಿಗುಣವಿಷಯವನು ಭೋಗಿಸುವ |
ಈಪುರುಷನಿಗೆ ಸುರನರಾದಿಮ
ರೂಪವಹ ಜನ್ಮಂಗಳಲಿ ಬಹು
ರೂಪವಹ ಗುಣಸಂಗವೇ ಕಾರಣವು ಕೇಳೆಂದ ||

ಈತನುವಿನಭಿಮಾನಿ ಪುರುಷನು
ತಾ ತಳುವದೆ ಯುಪಾಧಿಭೇದದಿ
ನೀತಿಯಿ ನುಪದ್ರಷ್ಟೃವಂ ತನುಮಂತೃವೆನಿಸುವನು |
ಆತನೇ ತಾಂ ಭರ್ತೃ ಭೋಕ್ತೃ ಗು
ಣಾತಿಶಯದ ಮಹೇಶ ಮಾಯಾ
ಜಾತವಳಿಯಲು ತಾನೆ ಪರಮಾತುಮನು ಕೇಳೆಂದ ||

ಆವನೀಪುರುಷನನು ಗುಣದಿಂ
ಭಾವಸಹಿತೀಪ್ರಕೃತಿರೂಪನು
ತಾವಿವೇಚಿಸಿ ತಿಳಿವ ನಾಸತ್ಪುರುಷನಾದವನು |
ಭೂವಲಯದೊಳು ಸಕಲಧರ್ಮ
ದೊಳಾವಚಂದದೊ ಳಿರ್ದೊಡೆಯು ಮಗು
ಳಾವಿಚಕ್ಷಣ ಜನಿಸೈ ಕಲಿ ಪಾರ್ಥ ಕೇಳೆಂದ ||

ಕೆಲಬ ರಾತ್ಮಧ್ಯಾನದಿಂದವೆ
ಚಲಿಸದಿರುತಿರ್ದಾತ್ಮನಲಿ ನಿ
ಶ್ಚಲರು ತಮ್ಮಿಂದಾತ್ಮನನು ಕಾಣುತ್ತಿಹರು ಸುಖದಿ |
ಕೆಲರು ಕೇಳೇಜ್ಞಾನಯೋಗದಿ
ಕೆಲರು ಕಾಂಬರು ಕರ್ಮಯೋಗದಿ
ಹಲವುಪರಿಯಿಂ ದೈದುವರು ಪರಮಾತ್ಮವಸ್ತುವನು ||

ಈಪರಿಯುಲರಿಯದೆ ಕೆಲರು ಶ್ರುತಿ
ರೂಪತತ್ವಧರಾಗಿ ಯಾಚಾ
ರ್ಯ್ಯೋಪದೇಶವ ಕೇಳಿ ತಚ್ಚರಣವನು ಸೇವಿಸುತ |
ಆಪರವ ಭಜಿಸುತ್ತಿಹರು ಕೇ
ಳಾಪುರುಷರುಗಳೆಲ್ಲರುಂ ಭವ
ರೂಪಮೃತ್ಯುವ ದಾಂಟುವರು ಕಲಿ ಪಾರ್ಥ ಕೇಳೆಂದ ||

ಎಲೆಭರತಕುಲ ತಿಲಕ ಕೇಳೈ
ನೆಲೆಗೆ ಸ್ಥಾವರಜಂಗಮಾತ್ಮಕ
ಹಲವುತೆರನಹ ಚೇತನಗ ಳೆನಿತೆನಿತುಭಾವದಲಿ |
ಒಲವಿನಿಂ ದೀದೇಹದೇಹಿಗ
ಳೊಳು ಬಲಿದ ಸಂಯೋಗದಿಂದವೆ
ಹೊಲಬನರಿಯದೆ ಜನಿಸುತಿಹು ವರಿಯೆಂದನಸುರಾರಿ ||

ಕೆಡುವಖಿಲಭೂತಂಗಳೊಳು ತಾ
ಕೆಡದೆ ಪರಮೇಶ್ವರನು ಸಮವಾ
ಗೆಡೆವರಿಯದಿಹ ನೆಂದುಕಾಂಬನು ಮನುಜನಾವವನು |
ಪೊಡವಿಯೊಳು ಕೇಳವನು ತತ್ವವ
ಬಿಡದೆ ಕಂಡವ ನೆನಿಸುತಿಹನಿದು
ಜಡಮತಿಗಳಿಗೆ ದೊರಕದೆಂದಸುರಾರಿ ನೇಮ್ಮಿಸಿದ ||

## ತ್ರಯೋದಶಾಧ್ಯಾಯಂ

ಎಲ್ಲೆಡೆಗಳಲಿ ಸಮವೆನಿಸಿ ಸಂ
ದಿಲ್ಲದಿಹ ಪರಮೇಶ್ವರನ ತಾಂ
ನಿಲ್ಲದಾವವ ನರಿಯುತಿಹ ನವ ತನ್ನ ತನ್ನಿಂದ |
ಎಲ್ಲಿಯುಂ ಕೆಡಿಸದೆ ಪರಾತ್ಮನ
ಬಲ್ಲಕಾರಣದಿಂದ ಮೋಕ್ಷವ
ನಲ್ಲಿಯೇ ಪಡೆವನು ಕಣಾ ಕಲಿ ಪಾರ್ಥ ಕೇಳೆಂದ ||

ಆವನೊಬ್ಬನು ಸಕಲಕರ್ಮವು
ವಿಾವಿಕರಿಸುವ ಪ್ರಕೃತಿಯಿಂದಮೆ
ತಾವುಮಾಡಿಸಿಕೊಳುತಿಹುವು ಪರಮಾತ್ಮ ನಿಜದಿಂದ
ಆವುದಕೆ ತಾ ಕರ್ತನಲ್ಲಂ
ದೀವಿಭೇದವ ಕಂಡೊಡವನೇ
ಭಾವಿಸಲು ತತ್ವವನು ಕಂಡವ ನೆಂದ್ದನಸುರಾರಿ ||

ಬೇರೆಬೇರಿಹ ಭೂತನಿಚಯವು
ಬೇರೆನಿಸದಿಹ ಬೊಮ್ಮನಲ್ಲಿಯೆ
ತೋರುತಿಹು ವೊಂದೆಡೆಯೊಳೆಂದಾಫಾಗಲರಿಯುತಿಹ |
ಬೇರೆನಿಸ ದದರಿಂದ ಲಖಿಳವ
ವಿಾರಿ ತೋರುವ ಬೊಮ್ಮ ತಾಸಹ
ಸಾರುತಿಹುವೀಯರ್ಥವನು ಶ್ರುತಿನಿಕರ ಕೇಳೆಂದ ||

ಆದಿಯಿಲ್ಲದನಾದಿನಿರ್ಗುಣ
ನಾದ ಕತದಿಂದವೆ ಪರಾತ್ಮನು
ವಾದಹೊದ್ದದೆ ನಿತ್ಯನೆನಿಸುವ ನೀಶರೀರದಲಿ |
ಆದರದಲಿರುತಿರ್ದೊಡೆಯು ಕಾ
ಮಾದಿಗಳ ನೆರೆ ಮಾಡ ಕರ್ಮದ
ಲಾದಫಲದಿಂ ಲೇಪವಡೆಯನು ಪಾರ್ಥ ಕೇಳೆಂದ ||

ಆವ ಪರಿಯಿಂ ಗಗನವಗಲಕೆ
ತೀವಿಕೊಂಡಿರುತಿರ್ದೊಡೆಯುಂ ನಿಜ
ಭಾವದಿಂದಲಿ ಸೂಕ್ಷ್ಮವಾಗಿಯೆ ಸರ್ವಲೇಪವನು |
ಆವ ಪರಿಯಿಂ ಪಡೆಯದಿಹವೊಲು
ಭಾವಿಸಲಿಕೀಯಾತ್ಮ ನಖಿಳಸ
ಜೀವತನುಗಳೊಳಿರ್ದೊಡೆಯು ನಿರ್ಲೇಪ ಕೇಳೆಂದ ||

ಎಂತು ಸೂರ್ಯನದೊಬ್ಬನೇ ನಿ
ಶ್ಚಿಂತೆಯಿಂದೀಸಕಲಲೋಕವ
ಸಂತತಂ ಬೆಳಗುತ್ತಿಹನೋ ಕ್ಷೇತ್ರವೆಲ್ಲವನು |
ಅಂತು ಬೆಳಗುತ್ತಿಹನು ಜಗದೊಳು
ಸಂತ ನಾಕ್ಷೇತ್ರಜ್ಞ ನಿದುವೇ
ದಾಂತಸಿದ್ಧವು ನಂಬು ನೀನಿದನೆಂದನಸುರಾರಿ ||

ಆರು ಕೆಲಬರು ಜ್ಞಾನದೃಷ್ಟಿಯ
ಸಾರದಿಂ ದೀತೆರದಿ ಕ್ಷೇತ್ರವಿ
ಕಾರವಂ ಕ್ಷೇತ್ರಜ್ಞರುಗಳ ವಿಭೇದನಿರ್ಣಯವ |
ಕಾರಿಯದ ಭೂತಂಗಳನು ತ
ತ್ಕಾರಣದ ಪ್ರಕೃತಿಯ ವಿನಾಶವ
ನಾರರಿವರವರೈದುವರು ವರಮೋಕ್ಷಸಿದ್ಧಿಯನು ||

|| ಇಂತು ಕ್ಷೇತ್ರಕ್ಷೇತ್ರಜ್ಞವಿಭಾಗವೆಂಬ ತ್ರಯೋದಶಾಧ್ಯಾಯಂ ಸಂಪೂರ್ಣಂ ||

# ಚತುರ್ದಶಾಧ್ಯಾಯಂ

ಸೂಚನೆ|| ಎನ್ನ ಮೂಲಪ್ರಕೃತಿಯಿಂದು
ತ್ಪನ್ನವಾದ ಗುಣತ್ರಯಂಗಳ
ವನ್ನಿಸದೆ ಮೀರಿದ ಮಹಾತ್ಮನ ಪಾರ್ಥ ಕೇಳೆಂದ |

ಮತ್ತೆ ಕೇಳ್ಳೆ ಹಿಂದೆ ನಾ ಪೇ
ಳ್ದುತ್ತಮಜ್ಞಾನಂಗಳೊಳಗ
ತ್ಯುತ್ತಮದ ಮತ್ತೊಂದು ಜ್ಞಾನವ ಪೇಳುವೆನು ನಿನಗೆ |
ಸತ್ಯದಿಂ ಮುನಿಮುಖ್ಯರಾವುದ
ಚಿತ್ತದಿಂ ಸೆರೆ ಗಳಿಸಿದುದರಿಂ
ನಿತ್ಯವಹ ಸಿದ್ಧಿಯನು ಪಡೆವರು ಪಾರ್ಥ ಕೇಳೆಂದ ||

ಪರಮತತ್ವಜ್ಞಾನ ವಿದರಾ
ದರಭರದಿ ಸಾರ್ದೆನ್ನ ಸರಿಯಹ
ಪರಮ ಪದವಿಯ ಪಡೆವರ್ಕೈ ಈ ಸೃಷ್ಟಿಕಾಲದಲಿ |
ಮರಳಿ ಜನಿಸರು ವಿಲಯದಲಿ ನೆರೆ
ಮರಣಧರ್ಮವ್ಯಥೆಯ ನೈದವೆ
ನಿರುತದಿಂ ದಿರುತಿಹರು ಸುಖದಲಿ ಪಾರ್ಥ ಕೇಳೆಂದ ||

ಮುನ್ನ ಮೂಲಪ್ರಕೃತಿ ತಾನೇ
ಯೆನ್ನ ಯೋನಿಯೆನಿಪ್ಪು ದದರಲಿ
ಭಿನ್ನ ಸಚರಾಚರದ ಗರ್ಭವನಿರಿಸುವೆನು ನಾನು
ಸನ್ನಿಹಿತವಾ ಗದರದೆಸೆಯಿಂ
ದನ್ಯವಹ ಭೂತಂಗಳಿಗೆ ಸಂ
ಪನ್ನಜನನವು ದೊರಕುವುದು ಕಲಿ ಸಾರ್ಥ ಕೇಳೆಂದ ||

ಸಕಲಸುರನರತಿರ್ಯಗಾದಿ
ಪ್ರಕರಯೋನಿಗಳಲ್ಲಿ ಜನಿಸುವ
ನಿಖಿಲ ಮೂರ್ತಿಗ ಳೇಸವಕೆ ನಾಂ ಹಿಂದೆ ಕರುಣಿಸಿದ |
ಪ್ರಕೃತಿಯೇ ಸುಕ್ಷೇತ್ರವಿಶ್ವಾ
ತ್ಮಕನು ನಾಂ ಬೀಜಪ್ರದಾಯಕ
ಸಕಲಲೋಕಕೆ ತಂದೆಯಾಗಿಹೆನೆಂದನಸುರಾರಿ ||

ಸತ್ವರಜತಮವೆಂಬ ಪೆಸರನು
ಪೆತ್ತು ತೋರ್ಪ ಗುಣತ್ರಯಂಗಳ
ವಿತ್ತ ಮೂಲಪ್ರಕೃತಿಯಿಂದವೆ ಜನಿಸಿ ದೇಹದಲಿ |
ನಿತ್ಯನವ್ಯಯನಾತ್ಮನನು ಹಿಡಿ
ದೆತ್ತಿ ಬಂಧಿಸುತಿಹುವು ಕನಸಿನ
ಕತ್ತಲೆಯಲಿಹ ಕಳ್ಳನಂದದಿ ಪಾರ್ಥ ಕೇಳೆಂದ ||

ಆ ಗುಣತ್ರಯದೊಳಗೆ ಸತ್ವವು
ಬೇಗ ನಿರ್ಮಲವಾದ ಕದದಿಂ
ಭೋಗಿಸಲು ಸರ್ವಪ್ರಕಾಶವು ತಿಳಿ ಯನಾಮಯವು |
ಯೋಗತತ್ವಜ್ಞಾನಸುಖ ಸಂ
ಯೋಗದಿಂ ಪುರುಷನನು ಬಂಧಿಸ
ಲಾಗಿ ತಾನಿಂತಿರುತಿಹನು ಕಲಿ ಪಾರ್ಥ ಕೇಳೆಂದ ||

ಘನರಜೋಗುಣವಾರ್ತೆ ಸಂಗತಿ
ಜನಿತ ಲೋಹಿತವರ್ಣ ವೆಂದದ
ನನುನಯದಿ ತಿಳಿ ಯಾರಜೋಗುಣ ದೇಹಿಯನು ಪಿಡಿದು |
ಅನವರತ ಸತ್ಕರ್ಮಸಂಗದಿ
ಮನುಜನನು ಬಂಧಿಸುಗು ಕುಂತೀ
ತನಯ ಕೇಳಿದ ನೆಂದನಾಮುರವೈರಿ ಕರುಣದಲಿ ||

ಉರವಣಿಸಿ ಪಜ್ಞಾನದಿಂವಿ
ಸ್ತರದಲುದಯಿಸಿ ದಾತಮೋಗುಣ
ಸುರನರಾದಿಗಳೆಲ್ಲರನು ಮೋಹಿಸುವು ದದುತಾನೇ |
ಇರೆಪ್ರಮಾದಾಲಸ್ಯ ನಿದ್ರಾ
ಭರದಿ ಬಂಧಿಸಿಕೊಂಡಿಹುದು ಸಂ
ಗರವಿಜಯಿ ಕೇಳ್ಳೈ ನಿದಾನ ವಿದೆಂದನಸುರಾರಿ ||

ಸತ್ವಗುಣ ಸುಖದಲ್ಲಿ ಪುರುಷನ
ಹತ್ತಿಸುವುದು ರಜೋಗುಣವು ತಾ
ವಿಸ್ತರದ ಕರ್ಮದಲಿ ಕೂಡಿಸುತಿಹುದು ಮನುಜನನು |
ಮತ್ತೆ ಜ್ಞಾನವ ಮುಸುಕಿ ದೇಹಿಯ
ಚಿತ್ತವನು ಮರವೆಯಲಿ ನೆರೆ ಕೂ
ಡುತ್ತಲಿಹುದು ತಮೋಗುಣವು ಕಲಿಪಾರ್ಥ ಕೇಳೆಂದ ||

ರಜತಮಂಗಳ ಗೆಲಿದು ಸತ್ವವು
ನಿಜದಿ ತಾನುದಯಿಪುದು ಬೇಗದಿ
ರಜವು ಸತ್ವತಮಸ್ಸುಗಳ ಪರಿಭವಿಸಿ ಜನಿಸುವುದು |
ರಜವನೀಸತ್ವವನು ಸೋಲಿಸಿ
ತ್ರಿಜಗದೊಳ ಗುದಯಿಸುವುದೀತಮ
ವಿಜಯ ಕೇಳ್ಳೈ ಮೂರುಗುಣ ವೀತೆರದೊಳಹುವೆಂದ ||

ತನುವಿನೀಸಕಲೇಂದ್ರಿಯಂಗಳ
ಮನೆಯ ತದ್ದ್ವಾರಂಗಳಲಿ ಸು
ಜನಿಸುಗೆಚ್ಚರು ಮತ್ತೆ ತತ್ವಜ್ಞಾನ ಚಿತ್ತದಲಿ |
ಅನುನಯದ ಲಾವಾಗಲುದಿಸುಗು
ವಿನಯದಿಂ ಕೇಳಾಗ ಸತ್ವದ
ಘನವೆನಿಪ ಗುಣ ಹೆಚ್ಚಿತೆಂದಿಂತರಿಯ ಬೇಕೆಂದ ||

ಘನರಜೋಗುಣ ಹೆಚ್ಚುತಿರಲೀ
ತನುಧನಾದಿಗಳಲ್ಲಿ ಲೋಭವು
ಮನದೊಳತ್ಯುದ್ಯೋಗ ಕರ್ಮಾರಂಭ ಮತಿಕೋಪ |
ಎನಿತು ವಿಷಯಸ್ಪೃಹೆಯನಿತು ಸಂ
ಜನಿಸುವುವು ಸಂಸಾರಿಗಳಿಗೆಲೆ
ಮನುಜರೊಳಗುತ್ತಮನೆ ಕೇಳೆಂದನು ಮುರಧ್ವಂಸಿ ||

ಮರವೆ ನಿದ್ರಾಲಸ್ಯ ಮೂಢತೆ
ಬೆರಗುವಡೆದುದ್ಯೋಗ ಶೂನ್ಯತೆ
ನಿರುಗೆಯಿಂ ನಿಜತತ್ವದೆಚ್ಚರದಿಲ್ಲದಿರುತಿಹುದು |
ನೆರೆ ತಮೋಗುಣ ಹೆಚ್ಚಲಿನಿತುಂ
ಮರೆಯಲೇ ಜನಿಸುತ್ತಲಿಹುವಿದ
ನರಿವುದೈ ಕರುನಂದನನೆ ನೀನೆಂದನಸುರಾರಿ ||

ಮತ್ತೆ ಕೇಳೈ ಪಾರ್ಥ ದೇಹಿಯು
ಸತ್ವಗುಣವಾವಾಗಹೆಚ್ಚಿರ
ಲಿತ್ತಮರಣವ ನೈದಿದಾಕ್ಷಣದಲ್ಲಿ ಸುಖದಿಂದ |
ತತ್ವವಿತ್ತುಗ ಳೈದೆ ನೆಲಸಿ
ರ್ದುತ್ತಮದ ಲೋಕಂಗಳನು ತಾ |
ಸತ್ಯವಾಗಿಯೆ ಸಾರುವನು ಕಲಿ ಪಾರ್ಥ ಕೇಳೆಂದ ||

ನರ ರಜೋಗುಣ ಹೆಚ್ಚಿದಾಗಲು
ಮರಣವನು ತಾನೈದಿ ಕರ್ಮದ
ಪರಮಸಂಗವನುಳ್ಳ ಮಾನವನಲ್ಲಿಜನಿಸುವನು |
ನಿರುತವಾಪರಿಯಲಿ ತಮೋಗುಣ
ವುರವಣಿಸಿ ಮೃತನಾದವನು ಕೇ
ಳ್ಧರೆಯೊಳಗೆ ಬಹ ಮೂಢಯೋನಿಗಳಲ್ಲಿ ಜನಿಸುವನು ||

ವಿತತಸತ್ಕರ್ಮಂಗಳಿಗೆ ಮುಂ
ದುದಯಿಸುವ ನಿರ್ಮಲಸುಖವು ತಾ
ಸದಮಲದ ಸಾತ್ವಿಕಗುಣಕೆ ಫಲವೆಂದು ಹೇಳುವರು |
ತುದಿಗೆ ದುಃಖವಿಕಾರ ರಂಜಿಸಿಂ
ಗುದಿಸಿ ತೋರುವ ಫಲ ತಮಸ್ಸಿಂ
ಗುದಯಿಸುವು ದಜ್ಞಾನ ಫಲವೆಂದನು ಮುಕುಂದನಿಸಿ ||

ಸತ್ವಗುಣದಿಂ ಜ್ಞಾನಮುದಿಸುಗು
ಮತ್ತೆ ರಾಜಸಗುಣದದೆಸೆಯಿಂ
ಚಿತ್ತದಲಿ ಘನಲೋಭವಹುದು ತಮೋಗುಣದದೆಸೆಯಿಂ |
ಮತ್ತತನ ವಧಿಕ ಪ್ರಮಾದವು
ಬಿತ್ತರದೊಳಜ್ಞಾನವುಂ ಬೆಂ
ಬತ್ತಿ ಜನಿಸುತ್ತಿಹುವು ಕೇಳೆಂದನು ಮುಕುಂದನಿಸಿ ||

ಸತ್ವಗುಣವುಳ್ಳವರು ಸೇರುವ
ರುತ್ತಮದ ಲೋಕಂಗಳನು ಕೇ
ಳ್ಮತ್ತೆ ರಾಜಸರೈದುವರು ಮನುಜಾದಿಲೋಕವನು |
ಇತ್ತ ತಾಮಸಗುಣದವರು ಬೀ
ಳುತ್ತಿಹರು ನರಕಾದಿಲೋಕದ
ಪೊತ್ತದೊಳಗೆಲೆಪಾರ್ಥ ಕೇಳೆಂದನು ಮುಕುಂದನಿಸಿ ||

ಅರಿಯಬಲ್ಲವ ನೀಜಗತ್ತಿಂ
ಗುರುವ ತ್ರಿಗುಣವೆ ಕರ್ತೃವಲ್ಲದೆ
ಹೊರಗೆ ಮತ್ತಿನ್ನೊಬ್ಬನಿಲ್ಲೆಂದೀಗುಣತ್ರಯದ |
ನಿರುಗೆಗಾಂ ಬೇರೆಂದದಾವವ
ನರಿವನಹ ನವನೆನ್ನ ಭಾವವ
ಪುರೆಯದೈದುವನೈ ಧನಂಜಯ ಎಂದನಸುರಾರಿ ||

ದೇಹಿ ಯೀದೇಹದಲಿ ಜನಿಸಿದ
ಜೀಹ ಮೂರುಂಗುಣಗಳಂ ವ್ಯಾ
ಮೋಹವಿಲ್ಲದೆ ಮೀರಿ ಜನಿಮೃತಿಜರೆಯ ದುಃಖಗಳ |
ದೇಹದಿಂ ಬಿಡುಗಡೆಯ ನೈದೀ
ದೇಹ ಬೀಳಲು ಮುಕ್ತಿಯನು ಸಂ
ದೇಹವಿಲ್ಲದೆ ಪಡೆವನೈ ಕಲಿ ಪಾರ್ಥ ಕೇಳೆಂದ ||

ಆವಕುರುಹಿಂ ದರಿಯಬಹುದೆಲೆ
ದೇವ ಈಗುಣಮೂರ ಮೀರಿದ
ಜೀವರೊಳಗುತ್ತಮನ ನೀತ್ರಿಗುಣಂಗಳೆಂಬುದನು |
ಆವಪರಿಯಿಂ ಮೀರುವನು ಮ
ತ್ತಾವಪರಿಯಿಂ ಬೆರಸಿರುವನಿದ
ನೀವು ಮುದದಿಂ ದೊರೆಯಬೇಕೆನ ಗೆಂದನಾ ಪಾರ್ಥ ||

ಎಲವೊಪಾಂಡವ ಗುಣಸಮೂಹದ
ಫಲವೆನಿಸುವ ಪ್ರಕಾಶವನು ನೆರೆ
ಬಲುಹನುಳ್ಳ ಪ್ರವೃತ್ತಿಯುಮ ನಜ್ಞಾನವೆಂಬುದನು |
ಒಲಿದು ಬಂದೊಡೆ ತೋಷಹೊದ್ದದೆ
ಕಳಿಯೆ ಬಯಸನವಂ ತ್ರಿಗುಣವನು
ಗೆಲಿದ ಪುರುಷನ ಚಂದವಿದು ಕೇಳೆಂದನಸುರಾರಿ ||

ಮುನಿಯಡಣ ಮಾವವ ನುದಾಸೀ
ನನವೊಲಿರುತೀ ಮೂರುಗುಣದಿಂ
ದನವರತ ಮಬಿಚಾಲ್ಯನೆನಿಪನು ಸಕಲದೇಹದಲಿ |
ಘನಗುಣಂಗಳು ನಡೆಯುತಿಹುವೆಂ
ದಿನಿತುವನು ಬಲ್ಲಾತನೇ ಈ
ತನುವಿನಿಚ್ಛೆಯಲಿರ್ಪ ಕಣಾ ಕಲಿ ಪಾರ್ಥ ಕೇಳೆಂದ ||

ಚತುರ್ದಶಾಧ್ಯಾಯಂ

ಆವನೀಸುಖದುಃಖದಲಿ ಸಮ
ಭಾವವುಳ್ಳವ ಸ್ವಸ್ವರೂಪಿನ
ಭಾವನಿಷ್ಠನು ಹೊನ್ನುಕಲುಹೆಂಟೆಯಲಿ ಸಮಮತಿಯು |
ಆವ ನಿಂದಾಸ್ತುತಿಗಳಲಿ ಸಮ
ನಾವ ಪ್ರಿಯವಪ್ರಿಯವನೆಲ್ಲವ
ಭಾವಿಸಲು ಸರಿಯಾಗರಿವ ನವ ಧೀರ ಕೇಳೆಂದ ||

ಆವ ನೀಬಹುಮಾನದಲಿ ಮ
ತ್ತಾವ ನೀಯವಮಾನದಲಿ ಸಮ
ನಾವವನು ಮಿತ್ರರಲಿ ಶತ್ರುಗಳಲ್ಲಿ ಸಮನಹನು |
ಆವ ನುದ್ಯೋಗಂಗಳೆಲ್ಲವ
ಭಾವಿಸದೆ ಬಿಟ್ಟಾತನ್ನೆ ಗುಣ
ಭಾವವನು ಮೀರಿದವನೆನಿಸುವ ನವನು ಕೇಳೆಂದ ||

ಆವ ನೆನ್ನನು ಪಲ್ಲಟಸದೆಯೆ
ಭಾವಭಕ್ತಿಯ ಯೋಗದಿಂ ನೆರೆ
ಸೇವಿಸುತಲಿಹ ನಾತ ನೀತ್ರಿಗುಣಂಗಳಂ ಮೀರಿ |
ಪಾವನೋತ್ತಮಬ್ರಹ್ಮನಹುದಕೆ
ಜೀವರೊಳು ನಿಷ್ಪಾಪನಹ ನಿಂ
ತಾವಿಮಲವೇದಾಂತಸಿದ್ಧವಿ ದೆಂದನಸುರಾರಿ ||

ಸ್ಥಿರವೆನಿಪ ವೇದಕ್ಕೆ ಪಿರಿದಹ
ಪರಮಮುಕ್ತಿಗೆ ನಿತ್ಯವೆನಿಸುವ
ನಿರುತ ಧರ್ಮಕೆ ಪಿರಿದೆನಿಪ ವೇದಾಂತನಿಜಸುಖಕೆ |
ಪರಿಕಿಸಲಿಕಿವಕೆಲ್ಲಕಂ ನಾ
ನಿರುವೆನೈ ನೆಲೆಯಾಗಿ ನೀನೆಲೆ
ನರನೆ ಕೇಳೊಲಿ ದೆಂದನಸುರಾರಾತಿ ಕರುಣದಲಿ ||

|| ಇಂತು ಗುಣತ್ರಯಭಾಗಯೋಗವೆಂಬ ಚತುರ್ದಶಾಧ್ಯಾಯಂ ಸಂಪೂರ್ಣಂ ||

# ಪಂಚದಶಾಧ್ಯಾಯಂ

ಸೂಚನೆ || ತನುವೆನಿಪ ವೃಕ್ಷವನು ಮತ್ತೀ
ತನುವ ಧರಿಸಿಹ ಪುರುಷನನು ನೆ
ಟ್ಟನೆ ತಿಳಿವವೊಲು ವಿವರಿಸಿಡೆ ನರ್ಜುನಗೆ ಮುರವೈರಿ ||

ಬೇರು ಮೊದಲಾಗಿಹುದು ಕೊಂಬು ವಿ
ಕಾರದಿಂ ಕೆಳಗಾಗಿಹುವು ಸಂ
ಸಾರವೃಕ್ಷಕೆ ಸಕಲಶ್ರುತಿಗಳೆ ಯೆಲೆಗಳಾಗಿಹುವು |
ವೀರ ಕೇಳಶ್ವತ್ಥವೆನಿಸುವು
ದಾರವೃಕ್ಷವದವ್ಯಯವು ತಾ
ವಾರರಿವರಿದ ನವರುಶ್ರುತಿವಿದ ರೆಂದನಸುರಾರಿ ||

ಮೆರೆಯುತಿಹ ಸಂಸಾರವೃಕ್ಷ
ಕ್ಕಿರುವ ಶಬ್ದಬ್ರಹ್ಮಮೂಲವು
ನಿರುಗೆಯಿಂ ಮಹದಾದಿತತ್ವವು ಶಾಖೆಯೆನಿಸುವುದು |
ಬೆರಗಿದೇಕೈ ಶ್ರುತಿ ನಿಕರ ಪರ್ಣವು
ಮರವೆಯಿಂದಂ ನಿತ್ಯವರಿವಿಂ
ಹರಿವುದಾಗಿ ಯನಿತ್ಯವಿದನರಿದವನೆ ಶ್ರುತಿವಿದನು ||

ಈ ಮರದ ತುದಿಮೊದಲುನಡುಗಳು
ನಾಮರೂಪಗ ಳಾವವಿಧದಿಂ
ದೀಮಹಿಯ ಮೇಲರಿಯಬಾರದು ಬೇರುವರಿದಿರ್ಪ |
ಈಮರನ ನಿಸ್ಸಂಗವೆನಿಸಿದ
ನಾಮಯುಷ ವರಶಸ್ತ್ರದಿಂ ನಿ
ಸ್ಸೀಮಬೋಧನು ಕಡಿದು ಮುಕ್ತಿಯ ಪಡೆಯಬೇಕೆಂದ ||

ಆದರನಂತರದಲ್ಲಿ ಯಾನಿಜ
ಪದವನರಿಯಲುಬೇಕು ನೋಡೈ
ಯದರಲೈಕ್ಯವ ಪಡೆದವರು ತಿರುಗಡು ಪುರಳಿ ಭವಕೆ |
ನಿರುತದಿಂ ದಾರಿಂದ ತೋರಿತು
ಮೊದಲನಾದಿಯ ಸೃಷ್ಟಿ ಯಾತನ
ಪದವನೈದುವೆನೆಂದು ಯತ್ನವ ಮಾಡಬೇಕೆಂದ ||

ಸಂಗದೋಷವ ಕಳದು ಹಮ್ಮವ
ಹಮ್ಮಗಳಳಿದ ನಿವೃತ್ತಕಾಮರು
ಹಿಂಗದೀಸುಖದುಃಖದ್ವಂದ್ವದಿ ಬಿಡಿಸಿಕೊಂಡವರು |
ಅಂಗವಳಿ ದಧ್ಯಾತ್ಮನಿಷ್ಠರು
ತುಂವಿಕ್ರಮತತ್ವವಿದ ರಾ
ಮಂಗಳೋತ್ತಮನಿತ್ಯಪದ ವೈದುವರು ಕೇಳೆಂದ ||

ಆವುದಾವೊಂದಮಲಪದವನು
ಪಾವಕನು ರವಿಶಶಿಗಳೆಂಬೀ
ಮೂವರುಂ ನೆರೆ ಬೆಳಗಲರಿಯರು ತಮ್ಮ ಹಬೆಯಿಂದ |
ಆವುದನು ಸೇರಿದರೆ ಮರಳರು
ಪಾವನೋತ್ತಮವೆನಿಪ ಪದವದು
ಭಾವಿಸಲು ತಾನೆನ್ನ ಪದವೈ ಪಾರ್ಥ ಕೇಳೆಂದ ||

ನರನೆ ಕೇಳೀಜೀವಲೋಕದ
ಉರವಣಿಸುವ ಷಡಿಂದ್ರಿಯಂಗಳು
ಭರದಿ ಪ್ರಕೃತಿಸ್ಥಂಗಳಾಗಿಯೆ ವಿಷಯಸಂಗದಲಿ |
ಇರಲವನು ಸೆಳೆಯುತ್ತ ಜೀವನು
ಪಿರಿದು ಪೆಸರಿಂದಿರುವ ಪುರುಷನು
ನಿರುತದಿಂದೆನ್ನಂಶವೆಂದರಿಯೆಂದಸಸುರಾರಿ ||

ಆತ ತಾನಾವಾವ ದೇಹವ
ನೋತು ಪೊಗುವನು ಮತ್ತಿರದೆ ತಾ
ನಾತನುಗಳನು ಬಿಸುಟು ಹೊಸವಡುವಾಸಮಯದಲ್ಲಿ |
ವಾತ ಪುಷ್ಪದ ಪರಿಮಳವನೊ
ಯ್ವಾತೆರದ ಲಾ ಇಂದ್ರಿಯವ ಜೀ
ವಾತುಮನು ತೆಗೆದೊಯ್ವನೆಲೆ ಕಲಿ ಪಾರ್ಥ ಕೇಳೆಂದ ||

ಈಪರಿಯ ಜೀವಾತ್ಮ ಶ್ರೋತ್ರವ
ದೀಪಿಸುವ ನೇತ್ರವನು ತ್ವಕ್ಕನು
ಮೂಪರಿಯ ರಸನೆಯುನು ಘ್ರಾಣವ ಮನವನುಂಕೂಡಿ
ರೂಪುರಸಗಂಧಾದಿ ವಿಷಯಕ
ಲಾಪವನು ಭೋಗಿಸುತಿಹೆನು ಚಿ
ದ್ರೂಪನಲ್ಲದೆ ತಾ ವಿಚಾರಿಸೆ ಬೇರೆಯಲ್ಲೆಂದ ||

ದೇಹವನು ಬಿಡವಾತನುಮ ನೀ
ದೇಹದೊಳಗಿರ್ಪಾತನುಮ ನೀ
ದೇಹಗುಣವನು ಕೂಡಿ ವಿಷಯಂಗಳನು ಭೋಗಿಸುವ |
ದೇಹಿಯನು ತಾವರಿಯರಾತ್ಮ
ದ್ರೋಹಿಮೂಢರು ಜ್ಞಾನಿಗಳು
ಸಂದೇಹವಿಲ್ಲದೆ ಕಾಣುತಿಹರೆಲೆಪಾರ್ಥ ಕೇಳೆಂದ ||

ಪರಮಮುನಿಗಳು ಯತ್ನದಿಂ ಕಾಂ
ಬರು ಕಣಾ ಜೀವಾತ್ಮನೇ ನಿ
ರ್ಧರಿಸಿನೋಡಲು ತವ್ಮೊಳಿಹ ಪರಮಾತ್ಮನೆಂದಿಂತು |
ದುರುಳ ರಂತಃಕರಣ ಶುದ್ಧಿಯ
ದೆರವೆನಿಸುವಜ್ಞರುಗ ಳಾತ್ಮನ
ಪಿರಿದು ಯತ್ನವಮಾಡಿಯುಂ ಕಾಣರು ಕಣಾ ಎಂದ ||

ಇಂದು ಸೂರ್ಯಾಗ್ನಿಗಳೆ ಲಾವುದ
ದೊಂದು ತೇಜವೆ ನಿಖಿಳಜಗವನು
ಕುಂದದನುದಿನ ಬೆಳಗುತಿರುತಿಹು ದಾಪ್ರಕಾಶವನು |
ತರದೆ ನೀನರಿ ಯೆನ್ನ ನಿಜಸಂ
ಬಂಧವೆಂದಿದ ನಖಿಳಶ್ರುತಿಮುಖ
ದಿಂದ ಪೇಳುತ್ತಿಹರು ಜ್ಞಾನಿಗ ಳೆಂದನಸುರಾರಿ ||

ಭೂತಳವ ನೊಳಪೊಕ್ಕು ಭೂತ
ವ್ರಾತವನು ನಾನೆನ್ನ ಬಹುಹಿಂ
ದೋತು ಧರಿಸುತ್ತಿಹೆನು ತಿಳಿ ಬಳಿಕುದಕಮಯವೆನಿಪ |
ಶೀತಕರ ನಾನಾಗಿ ಕೇಳೀ
ಭೂತಳದ ಲೋಷಧಿವನಸ್ಪತಿ
ಜಾತವೆಲ್ಲವ ಬೆಳಸುತಿಹೆ ನೆಲೆ ಪಾರ್ಥ ಕೇಳೆಂದ ||

ಬಳಿಕ ವೈಶ್ವಾನರನು ನಾನಾ
ಗುಳಿದಖಿಲಜೀವಿಗಳ ದೇಹಂ
ಗಳನು ಸಂಶ್ರಯಿಸುವೆನು ಪ್ರಾಣಾಪಾನದೊಡಗೂಡಿ |
ತಿಳಿಯೆ ನಾಲುಕುಪರಿಜಿ
ನನ್ನಂಗಳನು ಜೀರ್ಣಿಸುತಿಹೆನು ಕೇಳಾ
ನುಳಿಯೆ ಹೊರೆವವರಿಲ್ಲ ವಿಶ್ವವನೆಂದನಸುರಾರಿ ||

ಸಕಲರಂತಃಕರಣದೊಳು ಸು
ವ್ಯಕುತದಿಂ ದಿರುತಿರ್ಪೆನೆನ್ನಿಂ
ಪ್ರಕಟದಿಂ ಜ್ಞಾನಸ್ಮೃತಿಗ ಳಜ್ಞಾನವಿಸ್ಮೃತಿಯೂ |
ಸುಕರನಾ ಗರುಹಿಸಿಕೊಳುತ್ತಿಹೆ
ನಖಿಲಶ್ರುತಿವಚನಂಗಳಿಂ ನಾ
ನಿಖಿಲವೇದಾಂತಾರ್ಥಕರ್ತನು ವೇದವಿದನೆಂದ ||

ಲೋಕದಲ್ಲಿ ಕ್ಷರಾಕ್ಷರಾತ್ಮಕ
ರೇಕರಾಶಿಗ ಳೆನಿಪರಿಬ್ಬರೊ
ಳೇಕಪುರುಷಂ ಕ್ಷರನು ಭೂತಸಮೂಹವೆನಿಸುವನು |
ಬೇಕೆನಿಪ ಕೂಟಸ್ಥನವ್ಯಯ
ನೇಕ ನಕ್ಷರಪುರುಷನೆನಿಪಂ
ವ್ಯಾಕುಲತೆಯನು ಬಿಟ್ಟು ತಿಳಿ ನೀನೆಂದನಸುರಾರಿ ||

ಇರ್ವರಿಂ ಬೇರೆನಿಸುವವನಿ
ನ್ನೊರ್ವನುತ್ತಮಪುರುಷ ನಾಮಂ
ಪರ್ವಿ ಮೂಲೋಕವನು ಧರಿಸಿಹ ನಾತನವ್ಯಯನು |
ಉರ್ವಿನಲಿ ಪರಮೇಶ್ವರನು ತಾ
ನೊರ್ವನೇ ಕಾರಣನು ಲೋಕಕೆ
ಸರ್ವಗತಪರಮಾತ್ಮನೆನಿಪನು ಪಾರ್ಥ ಕೇಳೆಂದ ||

ಕ್ಷರಪುರುಷನನು ಮೀರಿ ಬಳಿಕ
ಕ್ಷರಪುರುಷನಿಂ ದಧಿಕನೆಂದೀ
ಪರಿಯುಳಾನೆನಿಸುವುದರಿಂ ಲೋಕದಲಿ ವೇದದಲಿ |
ಪರಮಪುರುಷೋತ್ತಮ ನೆನಿಸುತವೆ
ಪಿರಿಯಳೊಳು ವಿಖ್ಯಾತನಾಗಿಹೆ
ನಿರುತಕಿದು ತತ್ವಾರ್ಥವೆಲೆ ಕಲಿ ಪಾರ್ಥ ಕೇಳೆಂದ ||

ಆವನೊಬ್ಬನು ಮೂಢನಾಗದೆ
ದೇವಪುರುಷೋತ್ತಮನು ನಾನೆಂ
ದೀವಿವೇಕದ ಲರಿವ ನವ ಸರ್ವಜ್ಞನೆನಿಸುವನು |
ಪಾವನನು ಸರ್ವಾತ್ಮಭಾವದಿ
ಭಾವಿಸುತ ಲೊಲಿದೆನ್ನ ಭಜಿಸುವ
ನಾವಪರಿಯಿಂ ಬಿಡದೆಲೈಕಲಿಪಾರ್ಥ ಕೇಳೆಂದ ||

ಈಪರಿಯ ಲತಿಗೋಪ್ಯವಹ ನಿಜ
ರೂಪಬೋಧಕಶಾಸ್ತ್ರದರ್ಥ ನಿ
ರೂಪಿತವು ನಿನಗಾದುದೆನ್ನಿಂ ದಿದನು ಲೇಸಾಗಿ |
ವ್ಯಾಪರಿಸಿ ತಿಳಿಯಲ್ಕೆ ತತ್ವದ
ರೂಪರಿದು ಕೃತಕೃತ್ಯನಹೆಯೆಂ
ದೀಪರಿಯ ಹರಿ ತಿಳುಹಿಧನು ಧೃತರಾಷ್ಟ್ರ ಕೇಳೆಂದ || ೨೦

|| ಇಂತು ಪುರುಷೋತ್ತಮಯೋಗಮೆಂಬ ಪಂಚದಶಾಧ್ಯಾಯಂ ಸಂಪೂರ್ಣಂ ||

# ಷೋಡಶಾಧ್ಯಾಯಂ

---

ಸೂಚನೆ || ನಿರುತದಿಂ ದೈವಾಸುರಗಳೆಂ
ಬೆರಡು ಪ್ರಕೃತಿವಿಭಾಗದಿಂದಿಹ
ನರರ ವರ್ತನೆಗಳನು ಹರಿ ಪಾರ್ಥಂಗೆ ಕಲುಣಿಸಿದ ||

ಅಭಯ ಸತ್ವದ ಶುದ್ಧಿ ದಾನಸಹ
ವಿಭವ ಸಕಲೇಂದ್ರಿಯದ ನಿಗ್ರಹ
ಶುಭವೆನಿಪ ವರಯಜ್ಞ ರಿಜುತನ ವೇದಪಠನೆಗಳು |
ಅಭವನನು ಮೆಚ್ಚಿಸುವ ತಪವತಿ
ರಭಸವಲ್ಲದ ಜ್ಞಾನಯೋಗ
ಪ್ರಭೆಯನಿಲವಿವು ದೇವತಾಪ್ರಕೃತಿಗಳಿಗಹುವೆಂದ ||

ಕೊಲ್ಲದಿರುಹವು ಸತ್ಯಭಾಷಿತ
ವೆಲ್ಲೆಡೆಯಲಕ್ರೋಧ ಕೊಂಡೆಯ
ನಲ್ಲದಿರುಹವು ಶಾಂತಿ ಲಜ್ಜೆಯಿಚಾಪಲಂ ತ್ಯಾಗ |
ಸಲ್ಲಲಿತದಯೆ ಜೀವಿಮಾತ್ರದೊ
ಳೆಲ್ಲಿಯುಂ ವೈರಾಗ್ಯ ಮೃದುತನ
ವೆಲ್ಲವಿವು ದೈವಪ್ರಕೃತಿಗಹು ವೆಂದನಸುರಾರಿ ||

ದೇವತಾಪ್ರಕೃತಿಯಲಿ ಜನಿಸುವ
ನಾವನಾತಂ ಗಧಿಕತೇಜವು
ಪಾವನದ ಸ್ಮರಣೆ ಮಹಾಧೃತಿ ಯಿತ್ತೆರದ ಶೌಚ |
ಜೀವಬಾಧೆಯು ಬಿಡುವು ದೀತನು
ಭಾವದಭಿಮಾನಿಕೆಯನುಳಿದಿರ
ಜೀವಸುಧೆಯೊಳು ಸಂಭವಿಸುಪುವು ಪಾರ್ಥ ಕೇಳೆಂದ ||

ಆಸುರಪ್ರಕೃತಿಯು ಉದಿಸಿದವ
ಗೇಸು ಗುಣವುದ್ಭವಿಪು ವೆಂದೆನೆ
ಬೇಸರದೆ ಕೇಳ್ಳೈ ಧನಂಜಯ ದಂಭವಭಿಮಾನ |
ರೋಷ ದರ್ಪ ಸಮಸ್ತ ಜನಮಂ
ಕ್ಲೇಶಗೊಳಿಸುವ ಬಹುಳನಿಷ್ಠುರ
ಭಾಷೆ ಯಂತಜ್ಞಾನ ಜನಿಸುವು ವೆಂದನಸುರಾರಿ ||

ವಿದಿತದೈವಪ್ರಕೃತಿಯೆಂಬುದು
ಸದಮಲದ ಮೋಕ್ಷಕ್ಕೆ ಕಾರಣ
ವೊದವಿದೀಸಂಸಾರಬಂಧನ ಕಾಸುರಪ್ರಕೃತಿ |
ಪದುಳದಿಂ ಕಾರಣವೆನಿಸುತಿಹು
ದಿದರೊಳಗೆ ದೈವಪ್ರಕೃತಿಯೊಳ
ಗುದಿಸಿದವನಾಗಿರ್ಪೆ ಶೋಕಿಸಬೇಡ ನೀನೆಂದ ||

ನಿರುತವೀಲೋಕದಲಿ ದೈವಾ
ಸುರರೆನಿಸಿದಿತ್ತೆರದ ಪ್ರಜೆಗಳು
ಭರದಿ ನಿರ್ಮಿತರಾಗಿರುವ ರವರೊಳಗೆ ನಾಂ ನಿನಗೆ |
ಒರೆದೆ ದೈವಪ್ರಕೃತಿಯನು ವಿ
ಸ್ತರದಲಾಸುರಪ್ರಕೃತಿಯನು ಮುಂ
ದೊರೆವೆ ನವಧಾನದಲಿ ಕೇಳೆಂದನು ಮುರಧ್ವಂಸಿ ||

ಅರಿಯ ರೀಭವಬಂಧಕರ್ಮವ
ನರಿಯ ರೀಭವ ರೋಹ ಕರ್ಮವ
ಮೆರೆಯುವಾಸುರಸಂಪದದ ಉದಯಿಸುವ ಮಾನವರು
ಉರುವ ಬಾಹ್ಯಾಂತರವಿಶುದ್ಧತೆ
ಮೆರೆವ ಸತ್ಯಾಚಾರವೆಂಬಿವು
ನಿರುಗೆಯಿಂ ದಿಲ್ಲವರಿಗೆಲೆ ಕಲಿಪಾರ್ಥ ಕೇಳೆಂದ ||

ಜಗವಸತ್ಯವು ಪುಣ್ಯಪಾಪಾ
ದಿಗಳ ಸೀಮೆ ಯದಿಲ್ಲವೆಂದೆನು
ತಗಣಿತಂ ಪರಮೇಶ್ವರಂ ತಾನಿಲ್ಲವೆಂದೆನುತ |
ಬಗುಳುತಂ ಸ್ತ್ರೀಪುರುಷ ಸಂಗದಿ
ಜಗವುದಯಿಸುಗು ಕಾಮನೇ ಈ
ಜಗಕೆ ಕಾರಣನೆಂದು ಹೇಳುವರೆಂದನಸುಸಾರಿ ||

ಈಪರಿಯ ಕಾಣಿಕೆವಿಡಿದು ನಿಜ
ರೂಪ ತಿಳಿಯದೆ ನಷ್ಟಚಿತ್ತದ
ಪಾಪಕರ್ಮಿಗ ಳಲ್ಪಬುದ್ಧಿಗಳಾದ ಮಾನವರು |
ಕಾಪುರುಷ ರೀಲೋಕವನು ನೆರೆ
ತಾಪಿಸಲಿಕೋಸುಗರ ಜನಿಸುವ
ರೌಪರಮಪುರುಷನನರಿಯ ರೆಲೆ ಪಾರ್ಥ ಕೇಳೆಂದ ||

ಡಂಭಮಾನಮದಂಗಳನು ಬಿಡ
ದಿಂಬುಗೊಂಡಿಹ ನರರು ಬಯಕೆಯ
ತುಂಬದಿಹ ಕಾಮವನವಜ್ಞತೆಯಿಂದಲಾಶ್ರಯಿಸಿ |
ಡೊಂಬಿಯಿಂ ದತಿಕಷ್ಟನಿಯಮ
ಹಂಬಲಿಸುತಾಶ್ರಯಿಸಿ ಶುಚಿತನ
ವಿಂಬುಗೊಳ್ಳದ ವ್ರತವ ನಾಚರಿಸುವರು ಕೇಳೆಂದ ||

ಮರಣವೇ ಕಡೆಯಾಗಿ ಹವಣಿಸ
ಲರಿದೆನಿಪ ಚಿಂತೆಯನು ತಾವತಿ
ಭರದಲ್ಪೈದಿಯೆ ವಿಷಯಭೋಗಾಸಕ್ತರುಗಳಾಗಿ |
ಸ್ಮರಸ ಯೋಗವನುಳಿದು ಜಗದೊಳು
ಪಿರಿದೆನಿಪ ಪುರುಷಾರ್ಥವಿಲ್ಲೆಂ
ದಿಕದೆ ನಿಶ್ಚೈಸುತ್ತಲಿಹ ರೆಲೆ ಪಾರ್ಥ ಕೇಳೆಂದ ||

ದುರುಳರಾಶಾಪಾಶಗಳ ಸಾ
ವಿರಗಳಿಂ ಬಿಗಿವಡೆದು ಭೋಗಾ
ತುರತೆಯಿಂದವರುಗಳು ಕಾಮಕ್ರೋಧಪರರಾಗಿ |
ಪಿರಿದು ವಿಷಯಂಗಳಲಿ ಭೋಗವು
ದೊರಕಲೋಸುಗ ವರ್ಥನಿಚಯುವ
ಪರವ ಬಿಟ್ಟನ್ಯಾಯದಿಂ ದಾರ್ಜಿಸುತಲಿಹರೆಂದ ||

ಇದನು ನಾನಿಂದಾರ್ಜಿಸಿದೆ ಮುಂ
ದಿದರಲಹ ಬಯಕೆಯನು ಪಡೆವೆನಿ
ದಿದಕೊ ನಗಗೀಗುಂಟು ಮರಳೀಧನವು ತಾನೆನಗೆ |
ಹದುಳದಿಂ ದೊರಕೊಂಬುದೆಂದೀ
ಹದನನೇ ಚಿಂತಿಸುತಲಾಸುರ
ಪದದ ಮನುಜರು ಕೆಡುವ ರೆಲೆಕಲಿಪಾರ್ಥ ಕೇಳೆಂದ ||

ಎನ್ನದೆಸೆಯಿಂ ದಳಿದನೀಹಗೆ
ಯಿನ್ನುಳಿದ ಹಗೆಗಳುಮ ನಳಿಯಿಪೆ
ನಿನ್ನು ಪೃಥ್ವೀಶ್ವರನು ನಾನೇ ಭೋಗಿ ಸುಖಿ ನಾನೇ |
ಗನ್ನಗತಕಂಗಳನು ತಿಳಿದಿಹ
ಸನ್ನಿಹಿತಭುಜಬಲನು ನಾನೇ
ಉನ್ನತೋನ್ನತ ಸಿದ್ಧನೆಂಬನು ಪಾರ್ಥ ಕೇಳೆಂದ ||

ಎಲ್ಲರಿಂ ದತಿಧನಿಕನಾನೇ
ಬಲ್ಲಿತಹ ಸತ್ಕುಲವನುಳ್ಳವ
ನಿಲ್ಲಿಸರಿ ಯಾರೆನ್ನೊಡನೆ ಬೇರೊಬ್ಬ ನವನಿಯಲಿ |
ನಿಲ್ಲದೆಯೆ ಯಜ್ಞವನು ಮಾಡುವೆ
ನೆಲ್ಲರಿಗೆ ದಾನವನು ಕೊಡುವೆನು
ಭುಲ್ಲವಿಸುತಿಹೆ ನೆಂಬನಜ್ಞನು ಪಾರ್ಥ ಕೇಳೆಂದ

ಹಲವು ಚಿತ್ತಭ್ರಾಂತಿ ಯಿಂತಿರೆ
ಬಲಿದು ಮೋಹದ ಬಲೆಗಳೊಳು ನೆರೆ
ಸಿಲುಕಿ ಬಹುವಿಧವಿಷಯಭೋಗಾಸಕ್ತರಾದವರು |
ಬಲಿದು ತಾವತಿ ಕಷ್ಟವೆನಿಸುವ
ಹಲವು ನರಕಂಗಳಲಿ ಬೀಳುವ
ರೆಲೆಧನಂಜಯ ಆಸುರಪ್ರಕೃತಿಗಳು ಕೇಳೆಂದ ||

ತಮ್ಮ ತಾಂ ಪೊಗಳುತ್ತ ಬೆರೆವರ
ದೊಮ್ಮೆ ಬಹುಧನಮಾನಮದವನು
ನೆಮ್ಮಿಕೊಂಡಿರ್ಪವರು ಡಂಭದಿ ವಿಧಿಗಳನು ಬಿಟ್ಟು |
ದುರ್ಮತಿಗಳಾನಾಮಮಾತ್ರದ
ಕರ್ಮಯಜ್ಞವ ಯಜಿಸುತಿಹರೆಲೆ
ಧರ್ಮನಂದನ ನನುಜ ಕೇಳೆಂದನು ಮುರಧ್ವಂಸಿ ||

ಕಾಮವಂ ಕ್ರೋಧವನು ಹಮ್ಮನು
ತಾಮಸದ ಬಲದರ್ಪಗಳುಮಂ
ಪ್ರೇಮದಿಂ ದಾಶ್ರಯಿಸಿ ದಿವದಿರು ತಮ್ಮ ದೇಹದಲಿ |
ನೇಮದಿಂ ಪರತನುಗಳಲಿ ನಿ
ಸ್ಸೀಮನಂ ದ್ವೇಷಿಸುತ ಲೆನ್ನನು
ತಾಮಸ ರಸೂಯಿಪರು ಸುಜನರ ಸ್ವತ್ವಧದೊಳೆಂದ ||

ಈಪರಿಯ ಮದ್ದ್ವೇಷಿಗಳ ನತಿ
ಕೋಪಿಗಳ ನಶುಭರನು ಮಾನವ
ರೂಪ ಧರಿಸಿರ್ಪಧಮರನು ಸಂಸಾರಚಕ್ರದಲಿ |
ಪಾಪರೂಪದ ಲಸುರಯೋನಿಯ
ಲಾಪರಮದುಷ್ಟರನು ನೂಕುವೆ
ನೀಪರಿಯೊಳಿರ್ಪುದು ಕಣಾ ಕೇಳಾಸುರಪ್ರಕೃತಿ ||

ಅಸುರಯೋನಿಯ ನೈದಿ ತೊಳಲುತ
ಬಸವಳಿದು ನರರಜ್ಞರಾಗಿಯೆ
ಹೊಸಪರಿಯ ನಾನಾಭವಂಗಳ ಲೆನ್ನ ನಿಜಪದವ |
ಸಸಿನೆ ಸಾರದ ಕಥನದಿಂನಿ
ಪ್ಪಸರದಿಂ ನೆರೆ ಯಧಮಗತಿಯುನು
ಪಶುಗಳಂದದ ಲೈದುವರು ಕಲಿ ಪಾರ್ಥ ಕೇಳೆಂದ ||

ತನಗೆ ಕೇಡನತ ಮಾಡುತಿರುವೀ
ಘನವೆನಿಪ ನರಕಕ್ಕೆ ಬಾಗಿಲು
ವಿನುತವುತಿ ತಿಳಿ ಮೂರು ತೆರನಾಗಿ ಹುದದೆಂತೆನಲು |
ಜನಿತಕಾಮಕ್ರೋಧಲೋಭಗ
ಳಿನಿತ ನದುಕಾರಣದಿ ಬಿಡುವುದು
ಮನುಜನಾದವ ಸುಖವ ಪಡೆವೊಡೆ ಪಾರ್ಥ ಕೇಳೆಂದ ||

ಈತಮೋದ್ವಾರಂಗಳಿಂ ನಿ
ರ್ಭೀತರಾಗಿಯೆ ಮೂರರಿಂ ವಿ
ಖ್ಯಾತಿಯಿಂ ಬಿಡುಗಡೆಯನೈದಿದ ಮಾನವರು ತಮ್ಮ |
ನೂತನದ ಲೇಸಕ್ಕು ಮೇತರಿ
ನೋತದನೆ ಯಾಚರಿಪ ರದರಿಂ
ದಾತತುಕ್ಷಣ ಪಡೆವರೈ ಮೋಕ್ಷವನು ಕೇಳೆಂದ ||

ಆವನೊಬ್ಬನು ಶಾಸ್ತ್ರವಿಧ್ಯು
ಕ್ತಾವಳಿಯ ಬಿಟ್ಟಖಿಲಕಾಮುಗು
ಣಾವಳಿಗಳಿಂ ಮನಕೆ ಬಂದಂದದಲಿ ಚರಿಸುವನು |
ಭಾವಿಸಲಿಕವ ಸತ್ವಶುದ್ಧಿಯ
ಪಾವನದ ನಿಜಸುಖವ ಮುಕ್ತಿಯ
ನಾವಪರಿಯಿಂ ಪಡೆಯೆನೆಂದಸುರಾರಿ ಕರುಣಿಸಿದ ||

ಅದುನಿಮಿತ್ತದಿ ಪಾರ್ಥ ಕರ್ತ
ವ್ಯದಲಕರ್ತವ್ಯದಲಿ ಭಾವದ
ಪದವಿಯಲಿ ಶಾಸ್ತ್ರಂಪ್ರಮಾಣವು ನಿನಗೆ ಪರಿಕಿಸಲು |
ಐದಿತದಿಂದವೆ ಶಾಸ್ತ್ರದಲಿ ಹೇ
ಳಿದುದ ನೆರೆ ತಿಳಿದಖಿಲಕರ್ಮವ
ಹದುಳದಿಂ ದಾಚರಿಸಲಿಕೆ ನೀನರ್ಹನಹೆ ಯೆಂದ ||

— ಇಂತು ದೈವಾಸುರಸಂಪದ್ವಿಭಾಗಯೋಗವೆಂಬ ಷೋಡಶಾಧ್ಯಾಯಂ —

|| ಸಂಪೂರ್ಣಂ ||



# ಸಪ್ತದಶಾಧ್ಯಾಯಂ

ಸೂಚನೆ || ದಾನಯಜ್ಞತಪಂಗ ಳಿನಿತನು
ಮಾನವರ ಆಹಾರ ಭೇದವ
ದಾನವಾರಿ ನರಂಗೆ ಗುಣಭೇದದಲಿ ಬೋಧಿಸಿದ ||

ಆರುಕೆಲಬರು ಶಾಸ್ತ್ರವಿಧಿಯನು
ಪಾರದೆಲ್ಲವ ಬಿಟ್ಟು ಭಕ್ತಿಯ
ಸೇರಿ ಯಜ್ಞಂಗಳು ಮಾಡುವರವರ ನಿಷ್ಠೆಯನು |
ಸಾರಸಾತ್ವಿಕವೋ ರಜಸ್ಸಿನ
ಕಾರಿಯವೊ ತಾಮಸವೊ ಕರುಣಿಸು
ಶೌರಿ ಯೆಂದರ್ಜುನನು ಬಿನ್ನೈಸಿದನು ಭಕ್ತಿಯಲಿ ||

ಎಲೆ ಧನಂಜಯ ಮೂರು ತೆರದಲಿ
ನೆಲಸಿಹುದು ವಿಶ್ವಾಸವಾವುದು
ನೆಲೆಗೆ ಜೀವರಿಗೆಲ್ಲ ಜನಿಸಿರ್ಕುಂ ಸ್ವಭಾವದಲಿ |
ಲಲಿತಸಾತ್ವಿಕ ರಾಖಸವು ತಾ
ನುಳಿದ ತಾಮಸ ವೆನಿವುದನು ನಿ
ರ್ಮಲದಲರಿವಂತುಸುರುವೆನು ಕೇಳೆಂದನಸುರಾರಿ ||

ಅನಿಬರೆಲ್ಲರಿ ಗವರಬುದ್ಧಿಯ
ನೆನಪಿಗನುಗುಣವಾಗಿ ಭಕ್ತಿಯು
ಜನಿಸುತಿರ ಲಾಪುರುಷನೇ ತದ್ಭಕ್ತಿಮಯನಹನು |
ವಿನುತನಾವವ ನಾವಗುಣದಲಿ
ಜನಿತಭಕ್ತಿಯನುಳ್ಳವನೊ ತ
ನ್ಮನದಲೇ ಯಜಿಸುತ್ತಿಹನು ಕೇಳೆಂದನಸುರಾರಿ ||

ಸತ್ವಗುಣಯುಕ್ತರುಗಳೆಲ್ಲರು
ಮುತ್ತಮೋತ್ತಮದೇವರನು ಯಜಿ
ಸುತ್ತಿಹರು ರಾಜಸರು ಕೇಳಾಯಕ್ಷರಾಕ್ಷಸರ |
ನಿತ್ಯವಾಗಿಯೆ ಯಜಿಸುತಿಹ ರಿ
ನ್ನಿತ್ತ ಕೇಳೈ ತಾಮಸರುಗಳು
ಮತ್ತೆ ಭೂತಪ್ರೇತನಿಕರವ ಯಜಿಸುತಿಹರೆಂದ ||

ಆರಹಂಕಾರಾತಿಡಂಭ ವಿ
ಕಾರವುಳ್ಳವರಾಗಿ ವಿಷಯದ
ಸಾರಬಯಕೆಯ ವರಿಸಿ ಪೌರುಷ ಬಲವ ನಾಶ್ರಯಿಸಿ |
ಚಾರುಶಾಸ್ತ್ರವಿಚಾರವಿಲ್ಲದೆ
ಘೋರತಪವನು ಮಾಳ್ಪ ರವರನು
ವೀರ ನೀನರಿ ಯಸುರರೆಂದೀಪರಿ ನಿಧಾನದಲಿ ||

ಈತನುವಿನೊಳಗಿರ್ಪ ಭೂತ
ವ್ರಾತವನು ಕರಣೇಂದ್ರಿಯಂಗಳ
ಸೋತು ತಪದಿಂ ಬಡವು ಮಾಡುವ ರಲ್ಪಬುದ್ಧಿಗಳು |
ನೀತಿವಿದ ಕೇಳ್ತನು ವಿನೊಳಗಿ
ರ್ಪಾತುಮನು ತಾನೆನಿಸುವೆನ್ನನು
ನೇತಿಗಳಹುವರಸುರರೆಂದರಿ ಯೆಂದನಸುರಾರಿ ||

ಸರ್ವಜನಕಾಹಾರವೆಂತೆನ
ಲುರ್ವಿಯೊಳು ತಾಂ ತ್ರಿವಿಧವಾಗಿಯೆ
ಸರ್ವಕಾಲದೊಳಿಹುದು ಯಜ್ಞವು ತಪದನುಷ್ಠಾನ |
ಸರ್ವದಾನಂ ತ್ರಿವಿಧವವರೊಳ
ಪೂರ್ವವೆನಿಸುವ ಭೇದವೆಲ್ಲವ
ಸರ್ವಭಾವದಿ ವಿವರಿಸುವೆ ಕೇಳೆಂದನಸುರಾರಿ ||

ಆಯು ಬಲವಾರೋಗ್ಯ ಸತ್ವವ
ಮೇಯಸುಖ ವಿಂತಿನಿತಿನಿತನೀ
ಕಾಯದೊಳು ಹೆಚ್ಚಿಸುವ ರಸದಿಂ ಭರಿತವಾಗಿರ್ಪ |
ಬಾಯಿಗತಿಮೃದು ನಯ ಮನೋಹರ
ಹಾಯವೆನಿಪಾಹಾರವೇ ಕೌಂ
ತೇಯನೇ ಪ್ರಿಯವಹುದು ಸಾತ್ವಿಕನಾದವಂಗೆಂದ ||

ದಹಿಸಿ ವದನಾಂತರವ ದುಃಖಾ
ವಹವೆನಿಸಿ ಶೋಕಾಮಯಂಗಳ
ವಹಿಲದಿಂದಲಿ ಕೊಡುವ ಕಹಿ ಹುಳಿ ಲವಣ ವತಿತೀಕ್ಷ್ಣ |
ಬಹಳ ಕಠಿನವು ಬಿಸಿಯು ಮೆನಿಸಿದ
ಬಹುವಿಧಾಹಾರವದು ರಾಜಸ
ನಹ ನರಂಗೆಂದುಂ ಪ್ರಿಯವು ಕೇಳೆಂದನಸುರಾರಿ ||

ಆರಿದುದು ಹಳಸಿದುದು ರಸ ನೆರೆ
ಹಾರಿದುದು ಮಪವಿತ್ರವೆನಿಪುದು
ನಾರುವುದುಪೆಂಜಲಿನ ಬಹುದೋಹವನು ಧರಿಸಿದುದು |
ತೋರುವಿನಿತರ ಭೋಜನವು ಮದ
ವೇರಿ ಮರೆದಿಹ ತಾಮಸಂಗೀ
ಧಾರಿಣಿಯೊಳಹುದಿಷ್ಟತಮವೆಲೆಪಾರ್ಥ ಕೇಳೆಂದ ||

ಶ್ರುತಿವಿಹಿತದಿಂ ಯಜಿಸಬೇಕೆಂ
ಬತಿಶಯಾರ್ಥದಿ ನಿಲಿಸಿ ಮನವನು
ಸತತ ಫಲದಾಕಾಂಕ್ಷೆಯಿಲ್ಲದೆ ಪಾರಕಾಂಕ್ಷಿಗಳು |
ಕ್ಷಿತಿಯೊಳಾವುದನೆಸಗುವರು ಸ
ದ್ವ್ರತವದೇ ಸಾತ್ವಿಕರಿಗುಕ್ತ
ವ್ರತವೆನಿಸುತಿಹುದೈ ಧನಂಜಯ ಎಂದನಸುರಾರಿ ||

ಫಲವ ನೆರೆ ಬಯಸುತ್ತಲೆಂದುಂ
ಹಲವು ಜನವನುವಂಚಿಸುವುದಕೆ
ಬಲಿದಡಂಭಕ್ಕೋಸುಗರ ವೀಲೋಕದಲಿ ಜನರು |
ಒಲಿದು ಮಾಡುವ ಯಜ್ಞವೇ ತಾ
ನೆಲೆಗೆ ರಾಜಸವೆಂದು ತಿಳಿ ನೀ
ನೆಲೆಧನಂಜಯ ಎಂದು ಪುರುಷೋತ್ತಮನು ಕರುಣಿಸಿದ ||

ವಿಧಿಗಳಿಲ್ಲದೆ ವೇದಮಂತ್ರದ
ಪದವನೊಲ್ಲದೆಯನ್ನದಾನವ
ಮುದದಿ ಮಾಡದೆ ದಕ್ಷಿಣೆಗಳಲಿ ಹೀನವೆನಿಸಿರ್ಪ |
ಉದಯಿಸಿದ ವರಭಕ್ತಿಯಿಲ್ಲದ
ಮದಮುಖದ ಯಜ್ಞವನು ತಾಮಸ
ಪದವಿಯಂದೇ ಬಲ್ಲ ಹಿರಿಯರು ಪೇಳುತಿಹರೆಂದ ||

ದೇವಭೂಸುರ ಗುರುಮಹಿತರನು
ಭಾವದಿಂ ದಾರಾಧಿಸುವುದಂ
ತಾವಗಂ ಬಾಹ್ಯಾಂತರದ ಶುಚಿತನವು ರುಜುಭಾವ |
ಆವಿಶುದ್ಧಬ್ರಹ್ಮಚರ್ಯೆಯು
ಜೀವದಯೆ ಯೆಂಬಿನಿತು ದೇಹದ
ಠಾವಿನಲಿ ಜನಿಯಿಸುವ ತಪವೆನಿಸುವುದು ಕೇಳೆಂದ ||

ಪ್ರಾಣಿಗಳಿಗಂಜಿಕೆಯ ಮಾಡದ
ವಾಣಿ ಸತ್ಯಪ್ರಿಯದವಾಕ್ಯ
ಶ್ರೇಣಿ ವೇದಾಧ್ಯಯನ ಮಂತ್ರಜಪಂಗಳೆಂಬಿನಿತು |
ಕೇಣವಿಲ್ಲದೆ ಕೇಳು ಫಲುಗುಣ
ಮಾಣದಿದು ವಾಙ್ಮಯತಪವು ನೆರೆ
ಜಾಣರಿಂ ಪೇಳಿಸಿಕೊಳುತ್ತಿಹು ದೆಂದನಸುರಾರಿ ||

## ಸಪ್ತದಶಾಧ್ಯಾಯಂ.

ಮನದೊಳಗೆ ನಿರ್ಮಲತೆ ಸೌಮ್ಯತೆ
ಯನುನಯವು ತಾ ಮೌನ ಚಿತ್ತದ
ಘನನಿರೋಧವು ಭಾವವರಸಂಶುದ್ಧಿಯೆಂಬಿನಿತು |
ಮನುಜರೊಳಗುತ್ತಮನೆ ಕೇಳೈ
ಮುನಿಗಳಿಂ ಮಾನಸದ ತಪವೆಂ
ದೆನಿಸಿ ಕೊಂಬುದು ಶಾಸ್ತ್ರಸಿದ್ಧವಿ ದೆಂದನಸುರಾರಿ ||

ಫಲವ ಬಯಸದೆ ಯೋಗದಲ್ಲಿಯೆ
ನೆಲಸಿಕೊಂಡಿಹ ಮನುಜರಿಂ ಕೇ
ಳೊಲಿದು ಭಕ್ತಿಯನೆಸಗಿದುದು ಮೂತೆರದ ತಪದಲ್ಲಿ |
ನೆಲೆಗೆ ಸಾತ್ವಿಕ ವೆನಿಸಿಕೊಳುತಿಹು
ದೆಲೆ ಧನಂಜಯ ಕೇಳು ತಾನಿದು
ಸುಲಭವಲ್ಲೈ ತಾಮಸರುಗಳಿಗೆಂದನಸುರಾರಿ ||

ಹಿರಿಯರುಗಳಿವರೆಂದು ಲೋಕವು
ಭರದಿ ವಂದಿಸಿ ಸತ್ಕರಿಸಿ ವಿ
ಸ್ತರದ ಪೂಜೆಯ ಮಾಡಲೋಸುಗ ಡಂಭದಿಂ ಮಾಳ್ಪ |
ನರರ ತಪ ತಾನಾವುದಿಂತದು
ಧರೆಯೊಳಗೆ ರಾಜಸವೆನಿಸಿ ಮ
ತ್ತಿರದೆ ಚಂಚಲವೆನಿಸುವುದು ಕಲಿಪಾರ್ಥ ಕೇಳೆಂದ ||

ಮೂಢತನದಿಂದಾಗ್ರಹದಿ ಪರ
ಪೀಡೆಗೋಸುಗ ತನ್ನ ದಂಡಿಸಿ
ಮಾಡುತಿಹ ತಪವಾವುದದು ತಾನೇ ಧರಿತ್ರಿಯಲಿ |
ಕೂಡೆ ತಾಮಸವೆನಿಸುತಿಹುದೆಂ
ದಾಡಿಕೊಂಬರು ಸಕಲಶಾಸ್ತ್ರದ
ಜಾಡನರಿ ಬಲ್ಲವರುಗಳು ಕಲಿಪಾರ್ಥ ಕೇಳೆಂದ ||

ಇನಿಸುಮುಪಕಾರವನು ಮಾಡದ
ಮುನಿಗೆ ಕೊಡಬೇಕೆಂಬ ಮತಿಯಿಂ
ವಿನಯದಿಂ ಕೇಳಾವ ದಾನವು ಪುಣ್ಯದೇಶದಲಿ |
ದಿನದೊಳುತ್ತಮ ಪುಣ್ಯದಿನದಲಿ
ವಿನುತ ಸತ್ಪಾತ್ರದಲಿ ಮಾಡುವ
ಧನದ ದಾನವು ತನಗ ಸಾತ್ವಿಕವೆನಿಸುವುದು ಕೇಳು ||

ಮರಳಿ ತನಗುಪಕಾರವನು ಮುನಿ
ವರರುಗಳಲಿಚ್ಛೈಸಿ ಮೇಣಾ
ಸುರಪುರದ ಭೋಗಾದಿಗಳು ಮೊದಲಾದುವನು ಬಯಸಿ |
ಇರದೆ ಕಾಡುತ ಕೊಡುವ ದಾನವು
ಭರದಿ ಕೇಳಿಂತಾವುದೊಂದಿದು
ನರನೆ ರಾಜಸವೆನಿಸುತಿಹುದೆಂದಸುರರಿಪು ನುಡಿದ ||

ಲೇಸುಹೊಲ್ಲೆಹವರಿಯದೇ ದು
ರ್ದೇಶಕಾಲವನರಿಯದೇ ನಾಂ
ದಾಸ ನಿಮಗೆಂದೆನುತ ಸತ್ಕರಿಸದೆ ಕುಪಾತ್ರದಲಿ |
ಕ್ಲೇಶಪಡಿಸುತ್ತಾವುದಾನೊಂ
ದಾಸೆಯಿಂದವೆ ಕೊಡುವ ದಾನವ
ದೇಸುಪರಿಯಿಂ ತಾಮಸವು ತಾನೆನಿಸುತಿಹುದೆಂದ ||

ವರ ಪರಬ್ರಹ್ಮಕ್ಕೆ ನಾಮವು
ನಿರುತದಿಂದವೆ ಮೂರು ತೆರನಾ
ಗಿರುತಲಿಹು ಧೋಂ ತತ್ಸದೆಂದೆಂಬೀ ನಿರೂಪದಲಿ |
ಪರಿವಿಡಿಯಲಾಬೊಮ್ಮದಿಂದವೆ
ಪಿರಿಯ ಸೃಷ್ಟಿಯಕಾಲದಲಿ ಭೂ
ಸುರರು ಸುತಿಗಳು ಯಜ್ಞವಿಂತಿವು ಮೊದಲಲುದಿಸಿದುವು ||

ಸಪ್ತದಶಾಧ್ಯಾಯಂ.

ಅದುನಿಮಿತ್ತವೆ ವೈದಿಕರುಗಳ
ವಿಧಿವಿಹಿತ ವರಯಜ್ಞದಾನವು
ಸದಮಲದ ತಪವಂತು ಸತ್ಕರ್ಮಂಗಳಾದಿಯಲಿ |
ಮುದದಲೋಂವೆಂದುಚ್ಚರಿಸಿತಾ
ಪದುಳದಿಂದರ್ತಿಸುತಲಿಹುವೀ
ಪದವ ತಿಳಿ ನೀನೆಂದನಾಮುರವೈರಿ ಕರುಣದಲಿ ||

ವರಮುಮುಕ್ಷುಗಳಿಂದ ತತ್ತೆಂ
ದಿರದೆ ಫಲವನು ಬಿಟ್ಟುಯಜ್ಞವು
ಪಿರಿದೆನಿಪ ಸತ್ಕರ್ಮ ಬಹುವಿಧ ದಾನವೆಂಬಿನಿತು |
ನಿರುತ ವಿರಚಿಸಿಕೊಳುತಲಿಹುದೀ
ತೆರದಿ ಬೊಮ್ಮವನರಿದು ಯೋಗೀ
ಶ್ವರರು ಬೊಮ್ಮವನೈದುವರು ಕಲಿಪಾರ್ಥ ಕೇಳೆಂದ ||

ಪರತರಬ್ರಹ್ಮದಲಿ ವೋಣ್ಸ
ತ್ಪುರುಷರಲಿ ಸಚ್ಛಬ್ದ ತಾನು
ಚ್ಚರಿಸಿ ಕೊಳುತಿರ್ಪ್ಕಂ ಪ್ರಶಸ್ತದ ಕರ್ಮದೊಳಗಂತು |
ನಿರುತದಿಂದೀತೆರದಿ ತೋರುವ
ಪಿರಿದು ವಸ್ತುಗಳಲ್ಲಿಯುಂ ಗೋ
ಚರಿಸುವುದು ಸಚ್ಛಬ್ದವೆಲೆ ಕಲಿಪಾರ್ಥ ಕೇಳೆಂದ ||

ವಿದಿತವಹ ಯಜ್ಞದಲಿ ತಪದಲಿ
ಸದಮಲದ ದಾನದಲಿ ಪುರುಷಂ
ಗುದಯಿಸಿದ ವರಭಕ್ತಿ ಸತ್ತೆಂದೆನಿಸಿಕೊಳುತಿಹುದು |
ಅದರಿನಿಂಬಳಿಕೀಶ್ವರಾರ್ಪಣ
ಪದದ ಕರ್ಮವು ಸತ್ತೆನಿಸಿಕೊಂ
ಬುದು ಧನಂಜಯ ಕೇಳು ಸಚ್ಛಬ್ದದ ವಿಧಾನವಿದು ||

ಪರಮಭಕ್ತಿಜ್ಞಾನವಿಲ್ಲದೆ
ನರರು ಮಾಡಿದ ಯಜ್ಞದಾನವು
ಪಿರಿದೆನಿಪ ಸತ್ಕರ್ಮವೆಲ್ಲವಸತ್ತೆನಿಸುತಿಹುದು |
ನಿರುತದಿಂ ಪರಮೇಶ್ವರಾರ್ಪಣ
ಭರಿತವಾಗದೊಡೆಲ್ಲ ತಾನಿಹ
ಪರಕೆ ಸಾಧನವಲ್ಲ ಭಾರತವಂಶ ಕೇಳೆಂದ ||

ಇಂತು ಶ್ರದ್ಧಾತ್ರಯವಿಭಾಗ ವೆಂಬ ಸಪ್ತದಶಾಧ್ಯಾಯಂ

ಸಂಪೂರ್ಣಂ.

# ಅಷ್ಟಾದಶಾಧ್ಯಾಯಂ

ಸೂಚನೆ || ತ್ಯಾಗವನು ಸನ್ಯಾಸವನು ಗುಣ
ಭಾಗಕರ್ಮಂಗಳನು ಭಕ್ತಿಯೆ
ಯೋಗವನು ಪಾರ್ಥಂಗೆ ಬೋಧಿಸಿದನು ಮುರಧ್ವಂಸಿ ||

ಬಲುಭುಜಂಗಳಲಸುರಕೇಶಿಯ
ಗೆಲಿದವನೆ ಸಕಲೇಂದ್ರಿಯಂಗಳ
ಬಲಕೆ ಕಾರಣನೆನಿಪ ಕೃಪಾನಿಧಿಯೆ ಕೇಳ್ಕೈ |
ನೆಲೆಯ ಸನ್ಯಾಸದ ಮಹಾತ್ಮನೆ
ಸಲೆಪರಿತ್ಯಾಗದ ನಿಜವ ನಾಂ
ತಿಳಿಯಲಿಚ್ಛೈಸುವೆನು ಕರುಣಿಪುದೆಂದನಾಪಾರ್ಥ ||

ಆದೊಡರ್ಜುನ ಕಾಮ್ಯಕರ್ಮವ
ನಾದರಿಸಿ ಮಾಡದೆ ಬಿಡುವುದನು
ವೇದವಿದರಹಕವಿವರರು ಸನ್ಯಾಸವೆನುತಿಹರು |
ಈಧರಿತ್ರಿಯೊಳಖಿಲಕರ್ಮಫ
ಲೋದಯವ ಬಿಟ್ಟಹುದನೇ ಶ್ರುತಿ
ಸಾಧಕರು ತಾಂ ತ್ಯಾಗವೆನುನೆಹ ರೆಂದನಸುರಾರಿ ||

ಇತ್ತ ಕೆಲಬರು ಬುಧರು ಶ್ರುತಿಗಳು
ಪೆತ್ತಖಿಲಕರ್ಮವನು ಪಾಪದ
ವೃತ್ತಿಯನು ಬಿಡುವಂತೆ ಬಿಡಬೇಕೆಂದು ಹೇಳುವರು |
ಮತ್ತೆ ಕೆಲರಧ್ವರತಪೋದಾ
ನೋತ್ತಮದ ಕರ್ಮವನು ಬಿಡುವುದು
ಪಥ್ಯವಲ್ಲೆಂದೆನ್ನುತಿಹರು ಕಲಿಪಾರ್ಥ ಕೇಳೆಂದ ||

ಭರತಕುಲದೊಳಗುತ್ತಮೋತ್ತಮ
ನರನೆ ಕೇಳೀತ್ಯಾಗದಲಿ ವಿ
ಸ್ತರಿಸುವೆನು ಬಿಡದೆನ್ನ ನಿರ್ಧಾರಣವ ನೀನೊಸಿದು |
ವರಮುನಿಗಳಿಂ ಕರ್ಮವಿಷಯದ
ಪರಿವಿಡಿಯಲೀತ್ಯಾಗ ತಾನೇ
ನಿರುತದಿಂದವೆ ಮೂರುತೆರನೆಂದೆನಿಸುತಿಹುದೆಂದ ||

ಯಜ್ಞವಂ ದಾನವನು ತಪವಂ
ಪ್ರಾಜ್ಞರುಗಳಾಚರಿಸಬೇಹುದ
ವಜ್ಞೆಯನು ನೆರೆ ಮಾಡಿ ಬಿಡಲಾಗದು ವಿಚಾರಿಸಲು
ಯಜ್ಞದಾನತಪಂಗಳನು ತ
ಮ್ಮಜ್ಞತನವನು ಬಿಟ್ಟು ಮಾಡಲ
ಭಿಜ್ಞರಿಗೆಪುಣ್ಯಪ್ರದಂಗಳು ಪಾರ್ಥ ಕೇಳೆಂದ ||

ಈಪರಿಯ ಸತ್ಕರ್ಮವನು ಫಲ
ರೂಪಸಂಗವ ಬಿಟ್ಟು ತಿಳಿದವ
ರಾಪರಮಪುರುಷಾರ್ಥಕೋಸುಗ ಕಾಲಕಾಲದಲಿ |
ಆಪರಿಯಲೇ ಮಾಡಬೇಕೆಂ
ದೀಪರಿಯ ನಿರ್ಧಾರವೆನ್ನಯ
ದೀಪಿಸುವ ಸರ್ವೋತ್ತಮದ ಮತವೆಂದನಸುರಾರಿ ||

ನಿತ್ಯವಹ ಕರ್ಮವನು ಬಿಡುತಿಹು
ದುಕ್ತವಲ್ಲಾನಿತ್ಯಕರ್ಮವ
ಮತ್ತನಾಗಜ್ಞಾನದಿಂ ಬಿಡುತಿರೆ ನಿಧಾನಿಸಲು |
ಉತ್ತಮಪ್ರಜ್ಞರುಗಳಿಂದದು
ಮತ್ತೆ ತಾಮಸವೆನಿಸುವುದು ಪರ
ತತ್ವಸಾಧನವಲ್ಲ ತಾಸಿದ್ಧು ಪಾರ್ಥ ಕೇಳೆಂದ ||

ಆವನೊಬ್ಬನು ದುಃಖವೆಂದೇ
ಭಾವಿಸಿ ತನುಕ್ಲೇಶಭಯದಿಂ
ದಾವಿಹಿತಕರ್ಮವನು ಬಿಡಲದು ರಾಜಸತ್ಯಾಗ |
ಈವಿಕಾರತ್ಯಾಗವಂ ಮಾ
ಳ್ಪಾದಿಮೂಢಂ ತ್ಯಾಗಸಿದ್ಧಿಯ
ನಾವಪರಿಯಿಂ ಪಡೆಯನೈ ಕಲಿಪಾರ್ಥ ಕೇಳೆಂದ ||

ಮತ್ತೆ ಕೇಳೈ ನಿಯತಕರ್ಮವು
ನಿತ್ಯಮುಂ ಕರ್ತವ್ಯವೆಂದೇ
ಚಿತ್ತದಲಿ ಫಲಸಂಗವನು ನೆರೆ ಬಿಟ್ಟು ಮಾಡಲಿಕೆ |
ಸಾತ್ವಿಕತ್ಯಾಗವಿದು ತಾಂ ಸ
ರ್ವೋತ್ತಮದ ಮೋಕ್ಷಕ್ಕೆ ಸಾಧನ
ವಿತ್ತಲೆನ್ನಭಿಮತವೆನಿಸುವುದು ಪಾರ್ಥ ಕೇಳೆಂದ ||

ಸತ್ವಗುಣದಲಿ ನೆಲಸಿ ಕರ್ಮಫ
ಲೋತ್ತಮತ್ಯಾಗವನು ಪಡೆದಾ
ಚಿತ್ತದಲಿ ಸಂದೇಹ ಹರಿದು ವಿವೇಕಿಯಾದವನು |
ಮತ್ತೆಕೇಳೈ ಪಾಪಕರ್ಮದ
ಮೊತ್ತವಂ ದ್ವೇಷಿಸನು ಪುಣ್ಯನಿ
ಮಿತ್ತವಹ ಕರ್ಮದಲಿ ಸಿಲುಕನು ಪಾರ್ಥ ಕೇಳೆಂದ ||

ಧರಿಸಿ ದೇಹವನಿರ್ಪನರರಿಂ
ನಿರುತದಿಂ ದೀಸಕಲಕರ್ಮವ
ಭರದಿ ಬಿಡಲಳವಲ್ಲವಾಗಿಯೆ ಕರ್ಮಫಲತತಿಯ |
ಇರದೆ ಬಿಟ್ಟವನಾವ ಸವನೇ
ಧರೆಯೊಳಗೆ ತಾಂ ತ್ಯಾಗಿಯೆನಿಪನು
ಕುರುಕುಲಾನ್ವಯದವನೆ ಕೇಳೆಂದನು ಮುರಧ್ವಂಸಿ ||

ವರಸುಕೃತಫಲವಿಷ್ಟ ಪಾಪದ
ಪರಿಯ ಫಲವದನಿಷ್ಟ ವದರಿಂ
ಪರಿಕಿಸಲು ಸುಖದುಃಖಮಿಶ್ರದ ಕರ್ಮವಿವು ಮೂರು |
ಸೆರಿರವನು ಬಿಡೆ ಫಲವ ಬಯಸುವ
ನರರಿಗಿವು ದೊರಕೊಂಬುವೆಂದುಂ
ಭರದಿ ಸನ್ಯಾಸಿಗಳಿಗೊದಗವು ಪಾರ್ಥ ಕೇಳೆಂದ ||

ಎಲೆಧನಂಜಯ ಸಾಂಖ್ಯಮತದಲಿ
ಹಲವು ಕರ್ಮದ ಸಿದ್ಧಿಗೋಸುಗ
ಮೊಲವಿನಿಂದೀಯೈದು ಕಾರಣವೆಂದು ಬುಧರಿಂದ |
ನೆಲೆಗೆ ಹೇಳಿಸಿಕೊಂಬುವವಸುರೆ
ಚೆಲುವಿನಿಂದುಸುರುವೆನು ನೀ ಮನ
ಚಲಿಸದೇ ಕೇಳೆಂದನಾ ಮುರವೈರಿ ಕರುಣದಲಿ ||

ಮೊದಲಧಿಷ್ಠಾನವು ಶರೀರವಿ
ದಿದರ ಕರ್ತೃವು ಜೀವ ದೇಹದೊ
ಳೊದವಿದೀಶ್ರೋತ್ರಾದಿಗಳ್ಪನ್ನೆರಡು ಕರಣಗಳು |
ಇದರ ಚೇಷ್ಟೆಯು ದೈವ ಸಹಿತೀ
ವಿದಿತಪಂಚಕವಿದಕೆ ಕಾರಣ
ಸದಮಲನೆ ಕೇಳೆಂದನಾಗೋವಿಂದ ಮುದದಿಂದ ||

ಮನುಜನೆನಿಸಿಪ್ಪವನು ತನ್ನಯ
ಮನದಿವ ಚನದಿ ಕಾಯದಿಂ ತಾಂ
ವಿನುತವೈದಿಕಕರ್ಮವನು ಮೇಣ್ಪಾಪಕರ್ಮವನು |
ಎನಿತ ಮಾಡುವನದಕೆ ಹಿಂದಣ
ತನುವಹಂಕಾರಾದಿಪಂಚಕ
ವನವರತ ಕಾರಣವೆನಿಸುತಿಹುದೆಂದನಸುರಾರಿ ||

## ಅಷ್ಟಾದಶಾಧ್ಯಾಯಂ.

ಆದರಿಸೀಕರ್ಮದಲಿ ನಾಂ ಪೇ
ಳಿದುದಧಿಷ್ಠಾನಾದಿಪಂಚಕ
ವಿದಿತದಿಂ ಕಾರಣವೆನಿಸುತಿರೆ ಸಕಲಕರ್ಮದಲಿ |
ಸದಮಲಾತ್ಮನು ಕರ್ತೃವೆಂದೀ
ವದಡತನದಿಂ ಕಾಂಬನವ ತ
ತ್ವದವ ಕಾಣದ ಬಹಳ ದುರ್ಮತಿ ಯೆಂದನಸುರಾರಿ ||

ಆವನೊಬ್ಬಗೆ ಕರ್ಮವೆಂಬೀ
ಭಾವ ತನಗಾಗಿಲ್ಲವದರಿಂ
ದಾವನಾವನ ಬುದ್ಧಿ ಫಲದಿಂ ಲೇಪವಡೆದಿರದು |
ಭಾವಿಸಲಿಕವ ಹೇವವಿಲ್ಲದೆ
ಜೀವಲೋಕವ ಕೊಂದರೆಯು ತಾಂ
ಜೀವಹಿಂಸಕನಲ್ಲ ಪಾಪನಿಬದ್ಧನಲ್ಲೆಂದ ||

ಪರಮಶಾಸ್ತ್ರಜ್ಞಾನಜ್ಞೇಯವು
ಪರಿವಿಡಿಯಲಾಜ್ಞಾತೃವೆಂಬಿವು
ನಿರುತದಿಂ ಕರ್ಮಪ್ರವರ್ತನ ಮೂರುತೆರನಹುದು |
ಕರಣ ಕರ್ಮವು ಕರ್ತೃವೆಂಬೀ
ಪರಿಯು ಕರ್ಮದ ಕಾರಣವು ತಾ
ನಿರುತಿಹುದು ಮೂರಂದದಲಿ ಕಲಿಸಾರ್ಥ ಕೇಳೆಂದ ||

ಮತ್ತೆ ಕೇಳೈಜ್ಞಾನ ಕರ್ಮವು
ಕರ್ತೃವಾಗುಣಭೇದದಿಂ ತಾಂ
ನಿತ್ಯವಾಗೊಂದೊಂದು ತೋರ್ಪುವು ಮೂರುಮೂರಾಗಿ |
ಇತ್ತ ಗುಣಸಂಖ್ಯೆಯಲಿ ತಾ
ನೊಂಬತ್ತೆನಿಸಿ ತೋರ್ಪನಿತು ಭೇದವ
ಬಿತ್ತರಿಸಿ ಹೇಳುವೆನು ನೀ ಕೇಳೆಂದನಸುರಾರಿ ||

ಬೇರೆನಿಸಿ ನಾನಾಪ್ರಕಾರದಿ
ತೋರುವಖಿಲಪ್ರಾಣಿಗಳಲುರೆ
ಬೇರೆನಿಸದೆ ನಿತ್ಯವಾಗಿರು ವೊಂದುವಸ್ತುವನು |
ಮಾರಿ ಕಾಂಬನದಾವರಿವಿನಿಂ
ಸಾರವೆನಿಪಾ ಅರಿವನೆಲೆಕುರು
ವೀರ ನೀನರಿ ಸತ್ವಗುಣದಿಂ ಸಂಭವಿಸಿತೆಂದು ||

ತಾವಳಿಗಳೊಳು ಮಾಯೆಯಿಂ ಸಂ
ಭಾವಿಸಿದ ಬಹುವಿಧಪದಾರ್ಥಂಗಳನು ಬೊಮ್ಮದಲಿ |
ಆವಗಂ ಬೇರಾಗಿಯರಿವುದ
ದಾವಪರಿಯಿಂ ಘನರಜೋಗುಣ
ಭಾವದಿಂದವೆ ಜನಿಸಿತೆಂದರಿಯೆಂದನಸುರಾರಿ ||

ಭೂತಕಾರ್ಯದ ದೇಹವೊಂದರೊ
ಳಾತುಮನಿಹಂ ಬೇರೆಡೆಗಳೊಳ
ಗಾತುಮಂ ತಾನಿಲ್ಲವೆಂದರಿವಾವುದೊಂದಿಹುದು |
ಶ್ರೌತಸಂಪ್ರತಿಪನ್ನವಚನೋ
ದ್ಭೂತಪರಪಾರ್ಥವನು ಹೊದ್ದದ
ಪಾತವೋಗುಣಕಲ್ಪಿತಾಲ್ಪಜ್ಞಾನವರಿಯೆಂದ ||

ಕರ್ಮಭೇದವ ಕೇಳು ಫಲವನು
ಧರ್ಮದಿಂ ಬಯಸದವನಿಲ್ಲಾ
ಧರ್ಮವಿಲ್ಲದೆ ಬಹಳರಾಗದ್ವೇಷವನು ಬಿಟ್ಟು |
ನಿರ್ಮಮತೆಯಿಂ ಗೈದಕರ್ಮವ
ದೊಮ್ಮೆ ಸಾತ್ವಿಕವೆಂದೆನಿಸುವುದು
ಧರ್ಮನಂದನನನುಜ ಕೇಳೆಂದನು ಮುರಧ್ವಂಸಿ ||

ಫಲವ ಬಯಸುವನಿಂದ ಮೇಣೊಂ
ದೊಲವಿನಿಂ ಕರ್ತೃತ್ವಭಾವವು
ಬಲಿದವನಿನಾಯಾಸದಿಂ ಕೃತವಿಹಪರಂಗಳಲಿ |
ಸಲೆ ವಿಕರಿಸುತ್ತಿರ್ಪುದಾವುದು
ಫಲದ ಬಯಕೆಯ ಕರ್ಮ ತಾನದು
ನೆಲೆಗೆರಾಜಸಕರ್ಮವೆನಿಸುವುದೆಂದೆನಸುರಾರಿ ||

ತನಗೆ ಪುರುಷಾರ್ಥಗಳ ಸಿದ್ಧಿಯು
ಮನಕೆ ತಾರದೆ ಪರರ ಹಿಂಸೆಯು
ಮನದ ಸಾಮರ್ಥ್ಯವನು ನೋಡದೆ ಮೂರ್ಖತನದಿಂದ |
ಅನುಕರಿಸಿ ಮಾಡುತ್ತಲಿರುತಿಹ
ಧನದಪೇಕ್ಷೆಯ ಕರ್ಮ ಕೇಳ
ರ್ಜುನ ತಮೋಗುಣಜನಿತವೆನಿಸುವು ದೆಂದನಸುರಾರಿ ||.

ಮತ್ತೆ ಸಂಗವನುಳಿದು ದಿಟದಿಂ
ಕರ್ತೃ ತಾನಲ್ಲೆಂಬವನು ಧೃತಿ
ವೆತ್ತು ಸಂತೋಷವ ಧರಿಸಿ ನೆರೆ ಲಾಭನಷ್ಟದಲಿ |
ಯುಕ್ತಿಯಿಂ ಸಮನೆನಿಸಿ ಕರ್ಮವ
ಭಕ್ತಿಯಿಂ ಮಾಡುವನರನು ಗುಣ
ಯುಕ್ತಸಾತ್ವಿಕಕರ್ತೃವೆನಿಪನು ಪಾರ್ಥ ಕೇಳೆಂದ ||

ವಿಷಯಭೋಗಂಗಳಲಿ ನಿತ್ಯ
ವ್ಯಸನಿ ಕರ್ಮಂಗಳ ಫಲವ ಪಡೆ
ವೆಸಕವುಳ್ಳವ ಲೋಭಿ ಭೂತದ್ರೋಹಿಯಾದವನು |
ಅಶುಚಿ ಫಲಸಂಪ್ರಾಪ್ತಿನಿಷ್ಠೆಯ
ಲೆಸೆವ ಹರ್ಷವಿಷಾದವೆರಡುಂ
ಮಿಸುಪ ಕರ್ತೃ ರಜೋಗುಣಕೆ ಕೇಳೆಂದಧದಸುರಾರಿ ||

ನೀತಿಹೀನನಯುಕ್ತ ಶಠ ಜಡ
ಭೂತ ವಂಚಕನಲಸನಂತತಿ
ಭೀತನಿತ್ಯವಿಷಾದಿ ದುರ್ಜನ ದೀರ್ಘಸೂತ್ರಕನು |
ಶ್ರೌತಕರ್ಮಂಗಳನು ಬಿಟ್ಟಿರು
ವಾತ ತಾಮಸಕರ್ತೃವೆನಿಪನು
ನೀ ತಿಳಿದು ನೋಡೈ ಧನಂಜಯ ಎಂದನಸುರಾರಿ ||

ಎಲೆನರನೆ ಗುಣಭೇದದಿಂದವೆ
ನೆಲೆಗೆ ತೋರುವ ಬುದ್ಧಿಧೃತಿಗಳು
ಹೊಲಬಿನಲಿ ತಾಂ ಬೇರೆಬೇರಹ ಮೂರುಭೇದವನು |
ತಳೆದಿಹುವು ಪೇಳುವುದ ಕೇಳೈ
ಹಲವುಪರಿಯಿಂದೆಂದು ಲಕ್ಷ್ಮೀ
ಲಲನೆಯರಸನು ತಿಳುಹಿದನು ಧೃತರಾಷ್ಟ್ರಕೇಳೆಂದ ||

ಘೋರಸಂಸಾರಪ್ರವೃತ್ತಿಯ
ಸಾರವೆನಿಪ ನಿವೃತ್ತಿಯನು ಸ
ತ್ಕಾರಿಯ ವಸತ್ಕಾರಿಯುವನು ಭಯಾಭಯಂಗಳನು |
ಧೀರ ಕೇಳ್ಸಂಸಾರಬಂಧದು
ದಾರಮೋಕ್ಷವ ನರಿವುದಾವುದು
ಚಾರುಸಾತ್ವಿಕ ಬುದ್ಧಿಯದು ಕೇಳೆಂದನಸುರಾರಿ ||

ಆವುದೊಂದುದಯಿಸುವ ಬುದ್ಧಿಯ
ಭಾವದಿಂ ಧರ್ಮವನಧರ್ಮವ
ನಾವಸತ್ಕರ್ಮವನು ದುಷ್ಕರ್ಮವಧಾನಿಸಲು |
ಆವನರನೆಲೆಯಾಗಿ ತಿಳಿಯನು
ಭಾವಿಸಲಿಕಾಬುದ್ಧಿ ತಾಂ ನಿಜ
ಭಾವದಿಂ ರಾಜಸವೆನಿಸುವುದು ಪಾರ್ಥ ಕೇಳೆಂದ ||

ಇನ್ನು ಕೇಳು ತಮೋಗುಣದಿ ತಾ
ಮುನ್ನ ಮುಸುಕಿದ ಮತಿಯು ಧರ್ಮವ
ಸನ್ನುತದ ನಿಜಧರ್ಮವೆಂದೇ ಸಕಲ ವಸ್ತುಗಳ |
ಭಿನ್ನ ವಿಪರೀತಂಗಳಾಗಿಯೆ
ಮುನ್ನರಿಯುತಿಹುದಾವುದದು ನೆರೆ
ಯನ್ಯತಾಮಸಬುದ್ಧಿಯೆನಿಸುಗ ಪಾರ್ಥ ಕೇಳೆಂದ ||

ತನುಮನಃಪ್ರಾಣೇಂದ್ರಿಯಕ್ರಿಯೆ
ಘನತರದ ವರಯೋಗದಿಂ ನೆ
ಟ್ಟನೆ ಚರಿಸುವಂತಾವ ಧೃತಿಯಿಂ ಧರಿಸೆ ಪಟ್ಟಿಹುದು |
ಮುನಿಗಳುಸರುವ ಧೃತಿಯದೇ ತಾ
ನನಘಸಾತ್ವಿಕಧೃತಿಯೆನಿಸುತಿಹು
ದನಿಮಿಷಾಧಿಪತನಯ ಕೇಳೆಂದನು ಮುರಧ್ವಂಸಿ ||

ಒಂದುಸೆವದಿಂ ಕರ್ಮಫಲವನು
ಹೊಂದಲೆಂದನುಷಂಗದಿಂದಾ
ವೊಂದುಧೃತಿಯಿಂ ಧರ್ಮಕಾಮಾರ್ಥಂಗಳನು ನರನು |
ನಿಂದು ಧರಿಸುತ್ತಿಹನು ಕೇಳಾ
ನಂದದಿಂದಾಧೃತಿ ರಜೋಗುಣ
ದಿಂದ ನೆರೆ ಸಂಜನಿತವೆನಿಸುವು ದೆಂದನಸುರಾರಿ ||

ನಿರ್ಧರಿಸಿ ಕೇಳೈ ನರನೆ ದು
ರ್ಬುದ್ಧಿಯುಹ ನರನಾವಧೃತಿಯಿಂ
ನಿದ್ರೆಭಯಶೋಕಂಗಳನು ಮುದವನು ವಿಷಾದವನು |
ಹೊದ್ದಿ ತಾ ಬಿಡಲಾರದಿಹನು
ಬೈದ್ದ ಧೃತಿಯದು ನೆರೆ ತಮೋಗುಣ
ವೃದ್ಧಿಯಿಂದವೆ ಜನಿಸಿತೆಂದರಿಯೆಂದನಸುರಾರಿ ||

ಆವುದೊಂದನೆ ಬಿಡದೆ ಸೇವಿಸಿ
ಭಾವದಿಂ ಸುಖಿಸುತ್ತ ದುಃಖದ
ಹೇವರಿಕೆಯುಂತವನು ಕಾಂಬನು ಮಾನವೋತ್ತಮನು |
ಜೀವಿಪರುಗಳ ಮೂರುಪರಿಯಿಂ
ತಾವುಗುಂದಿಪ್ಪಾ ಸುಖವ ಸೀಂ
ಪಾವನನೆ ಕೇಳೆಂದನಾದನುಜಾರಿ ಕರುಣೆಯಲಿ ||

ವರತಪೋನುಷ್ಠಾನಕಾಲದ
ಲಿರುತಿಹುದು ವಿಷದಂತೆ ಮೊದಲೆಲೆ
ನರನೆ ಕೇಳ್ಕೆ ಕಡೆಯಲಾವುದದಮೃತಕೆಣೆಯಹುದು |
ನಿರುತದಿಂದಾಸುಖವು ತನ್ನಯ
ಪಿರಿದೆನಿಪ ಬುದ್ಧಿಪ್ರಸಾದದಿ
ದೊರಕೆ ಸಾತ್ವಿಕವೆನಿಸುವುದು ತಿಳಿಯೆಂದನಸುರಾರಿ ||

ಆದಿಯಲಿ ವಿಷಯೇಂದ್ರಿಯಂಗಳ
ಸಾದರದ ಯೋಗದಿನಮೃತದೋ
ಪಾದಿ ಪರಿಣಾಮದಲಿ ಹಾಲಾಹಲದವೋಲಿಹುದು |
ಭೇದವನು ತಿಳಿಯ್ಕೆ ನರನೆ ಯಿಾ
ಹಾದಿ ರಾಜಸ ಸುಖವಿದೆಂಬರು
ವೇದವೇದಾಂತಜ್ಞರೆಲೆಕಲಿಪಾರ್ಥ ಕೇಳೆಂದ ||

ಆವುದಾದ್ಯಂತಂಗಳೆರಡರೊ
ಳೀವುದೋ ತಾಂ ಮರವೆಯನು ನಿ
ದ್ರಾವಿಲಾಲಸ್ಯಪ್ರಮಾದಾದಿಗಳ ವಶದಿಂದ |
ಜೀವರೊಳು ತೋಪ್ಪಾ ಸುಖವು ನೆರೆ
ಭಾವಿಸಲು ತಾಮಸವೆನಿಪ್ಪುದು
ದೇವರಾಜತನೂಜ ಕೇಳೆಂದನು ಮುರಧ್ವಂಸಿ ||

ಅಷ್ಟಾದಶಾಧ್ಯಾಯಂ

ಭೂಮಿಯಲಿ ಸಗ್ಗದಲಿ ಸುರನರ
ತಾಮಸಪಶುಪ್ರಭೃತಿನಾನಾ
ನಾಮರೂಪಂಗಳಲಿ ತೋರುವ ಸಕಲಜೀವಿಗಳು |
ಈಮಹಾಪ್ರಕೃತಿಯೊಳುದಿಸಿದು
ದ್ದಾಮವೆನಿಸಿದ ಮೂರು ಗುಣದಿಂ
ತಾಮದೊಂದುಂ ಕೂಡಿವಿಹುದಿಲ್ಲೆಂದು ತಿಳಿಯೆಂದ ||

ಎಲೆಧನಂಜಯ ಪಾರ್ವರಿಗೆ ಸ
ತ್ಕುಲದ ಬಾಹುಜವೈಶ್ಯರಿಗೆ ನಿ
ರ್ಮಲರೆನಿಪಶೂದ್ರರಿಗೆ ತಾಂ ಪ್ರಕೃತಿಯುದೆಸೆಯಿನೊಗೆದ |
ಸಲೆಗುಣತ್ರಯದಿಂದ ಕರ್ಮಂ
ಗಳು ವಿಭಾಗಿಸಿಕೊಂಡಿಹುವು ನಿನ
ಗೊಲವಿನಿಂದದನುಸುರುವೆನು ಕೇಳೆಂದನಸುರಾರಿ ||

ಶಮೆದಮೆಗಳಾಸ್ತಿಕ್ಯ ತಪ ನಿ
ರ್ಮಮತೆ ಯಂತಃಕರಣಶುದ್ಧತೆ
ಸಮದ ಸೈರಣೆ ರಿಜುತನವು ನಿರ್ಮಲದ ವಿಜ್ಞಾನ |
ಅಮಲಶಾಸ್ತ್ರಜ್ಞಾನವುಂತಾಂ
ಕ್ರಮದಲುದಿಸುಗು ವಿಪ್ರರೊಳಗು
ತ್ತಮರುಗಳಿಗೆ ನಿಸರ್ಗವಾಗಿಯೆ ಪಾರ್ಥ ಕೇಳೆಂದ ||

ಕಲಿತನವು ತೇಜಸ್ಸು ಧೃತಿ ನಿ
ರ್ಮಲದ ದಕ್ಷತೆ ಸತ್ವಯುದ್ಧದ
ನೆಲದೊಳೋಡದೆ ಕಾದುವುದು ದಾನವನು ಮಾಡುವುದು |
ಸಲೆಮಹೇಶ್ವರಭಾವವೆಂಬೀ
ಹಲವು ಕರ್ಮವು ಜನಿಸುವುವು ತೋ
ಳ್ವಲರ ಕುಲಕೆ ನಿಸರ್ಗದಿಂದಲೆ ಪಾರ್ಥ ಕೇಳೆಂದ ||

ಕೃಷಿಯು ಮಾಡುವ ಗೋವುಗಳ ರ
ಕ್ಷಿಸುವ ಬೇಹಾರವನು ತಾ ಸಂ
ದಿಸುವ ವೈಶ್ಯಂಗಿದು ನಿಸರ್ಗದ ಕರ್ಮವೆನಿಸುವುದು |
ಎಸೆವ ವರ್ಣತ್ರಯುವ ನೆರೆ ಸೇ
ವಿಸುತಿಹುದೆ ಶೂದ್ರಂಗೆ ಪ್ರಕೃತಿಯ
ದೆಸೆಯುಲೊದವಿದ ಕರ್ಮವೆನಿಸುಗು ಪಾರ್ಥ ಕೇಳೆಂದ ||

ತನ್ನ ತನ್ನ ಸುಕರ್ಮದಲಿ ಸಂ
ಪನ್ನ ವಿಷಯುವನುಳ್ಳ ಮಾನವ
ನುನ್ನ ತೋನ್ನತಸತ್ವಶುದ್ಧಿಯ ಪಡೆಯುತಿಹನವನು
ತನ್ನ ಕರ್ಮದೆ ನಿರತನಾಗಿರೆ
ಸನ್ನಿಹಿತವರಮೋಕ್ಷವನು ತಾ
ನಿನ್ನು ಪಡೆವಂದವನು ಕೇಳೆಂದನು ಮುರಧ್ವಂಸಿ ||

ವ್ಯಕುತವಾಗಿಹು ದಾವನಿಂದವೆ
ಸಕಲಭೂತಕುಲಪ್ರವರ್ತನೆ
ಸಕಲ ಜಗನೆರೆ ಜನಿತವಾಗಿಹು ದಾಮಹೇಶಂಗೆ |
ಭಕುತಿಯಿಂ ನಿಜಕರ್ಮದಿಂದ
ರ್ಚಕರೆನಿಪ ಮಾನವರು ಸಿದ್ಧಿಯು
ಪ್ರಕಟದಿಂ ಪಡೆವರು ನಿಧಾನವಿದೆಂದನಸುರಾರಿ ||

ಸನ್ನುತಪ್ರಜ್ಞಾನ್ವಿತನೆ ಕೇ
ಳುನ್ನತೇಚ್ಛೆಯಿನಾಚರಿಸುತಿರು
ವನ್ಯರುತ್ತಮಧರ್ಮದಿಂದಂ ನ್ಯೂನವೆನಿಸುತಿಹ |
ತನ್ನಧರ್ಮವೆ ಲೇಸು ನಿಯತದ
ತನ್ನಕರ್ಮವ ಮಾಡುತಿರ್ಪಾ
ಧನ್ಯನರ ಪಾಪವನು ಪಡೆಯುನು ಪಾರ್ಥ ತಿಳಿಯೆಂದ ||

ಎಲೆ ಧನಂಜಯ ತನ್ನ ಕರ್ಮವು
ಕೆಲವುದೋಷವ ನುಳ್ಳೊಡೆಯು ತಾ
ನಲಸಿ ಬಿಡಲಾಗದು ಕಣಾ ತನ್ನುಕ್ತಕರ್ಮವನು |
ಬಲಿದ ಹೊಗೆಯಿಂ ದಗ್ನಿಯಂದದಿ
ಹಲವು ದೋಷದಿ ಸಕಲಕರ್ಮವು
ಸಲೆ ಸಮಾವೃತವಾಗಿಹುವು ಕೇಳೆಂದನಸುರಾರಿ ||

ಸಕಲವಿಷಯಸುಖಾನುಭವದಾ
ಸಕುತಿ ಹೊದ್ದದ ಬುದ್ಧಿಯಿಂದಂ
ತಕಪಟಾಂತಃಕರಣನಿಷ್ಠೆಯನುಳ್ಳ ನಿಸ್ಪೃಹನು |
ಯುಕುತವಹ ಸುಜ್ಞಾನದಿಂದಃ
ಸುಕರನಿಷ್ಕರ್ಮತೆಯ ಸಿದ್ಧಿಯ
ಭಕುತಿಯಿಂದೈದುವನು ನಿಜವಿದು ಪಾರ್ಥ ಕೇಳೆಂದ ||

ಜ್ಞಾನಸಿದ್ಧಿಯ ಪಡೆದ ಮನುಜನು
ತಾನು ಬೊಮ್ಮವ ಪಡೆವನೆಂತದ
ನಾನು ನಿನಗುಸುರುವೆನು ಸಂಕ್ಷೇಪದಲಿ ನಿಜದಿಂದ |
ಜ್ಞಾನನಿಷ್ಠೆಯದಾವುದೊಂದು ನಿ
ಜಾನುಭವವಾಗಲ್ಕೆ ತನ್ನಿಂ
ನೀನರಿದು ಸುಖಿಯಾಗು ಬೇಗದಲೆಂದನಸುರಾರಿ ||

ಶುದ್ಧವಾಗಿಹ ಬುದ್ಧಿಯಿಂ ಕೂ
ಡಿರ್ದ ಯೋಗೀಶ್ವರನು ಧೃತಿಯಿಂ
ಗೆದ್ದುನೆರೆ ತನ್ನಾತ್ಮವನು ನಿಯಮಿಸಿ ವಿರಾಗದಲಿ |
ಶಬ್ದಮೊದಲಾದಖಿಲವಿಷಯವ
ಹೊದ್ದದೇ ಕರಣಂಗಳಿಂ ನಿಜ
ವಿದ್ಯೆಯಿಂ ಕಾಮಾದಿಗಳ ಗೆಲೆಮುಕ್ತನಹನೆಂದ ||

ವಿರತಿಯಿಂ ದೇಕಾಂತದಲ್ಲಿಹ
ಪಿರಿಯನಲ್ಪಾಹಾರನಿರತನು
ಭರದಿ ತನುವಾಙ್ಮನವ ನಿಯಮಿಸಿದವನು ನಿತ್ಯದೊಳು |
ಪರಮತತ್ವಜ್ಞಾನಯೋಗದ
ಲಿರುತ ಳಾಪರಮಾತ್ಮಸಿದ್ಧಿಯ
ನಿರದೆ ಪಡೆವನು ಕೇಳು ನರ ಪರಮಾರ್ಥ ತಾನೆಂದು ||

ಪಿರಿಯಹಂಕಾರವನು ಬಲವನು
ಹರುಷಕಾಮಕ್ರೋಧದರ್ಪವ
ಸರಿರದನುಬಂಧದ ಪರಿಗ್ರಹವೆಲ್ಲವನು ಬಿಟ್ಟು |
ಭರದಿ ಮಮಕಾರಂಗಳಿಲ್ಲದೆ
ಪರಮಶಾಂತಿಯ ನುಳ್ಳಮನುಜನು
ನಿರುತದಿಂ ಪರಬ್ರಹ್ಮನಹುದಕೆ ಶಕ್ತನಹನೆಂದ ||

ಬ್ರಹ್ಮವಾದ ಪ್ರಸನ್ನಚಿತ್ತನು
ನಿರ್ಮತೆಯಿಂ ಶೋಕಿಸನು ನಿಜ
ಧರ್ಮವಿಷಯಂಗಳನೆಳಸನು ಚರಾಚರಂಗಳಲಿ |
ಒಮ್ಮೆಯೇ ಸರ್ವಾತ್ಮಭಾವವ
ನೆಮ್ಮಿ ಸಮವಾಗೆನ್ನ ನೋಡುತ
ನಿರ್ಮಲದ ಮದ್ಭಕ್ತಿಯನು ಪಡೆವನು ಕಣಾ ಎಂದ ||

ವರಭಕುತಿಯಿಂ ದೆನ್ನನರಿದಾ
ನರನು ನಿಜಪರಮಾತ್ಮರೂಪಿಂ
ಪರಮನಹ ತಾನಾವನೆಂದವನೆನ್ನ ನಿಶ್ಚಯದಿ |
ನಿರುತದಿಂದವೆ ತಿಳಿದನಂತರ
ಭರದಲೆನ್ನನಭೇದರೂಪಿಂ
ದಿರದೆ ಬೆರಸುವನಿದಕೆ ಸಂಶಯವಿಲ್ಲ ಕೇಳೆಂದ ||

ಸರ್ವಭಾವಂಗಳಲಿ ನನ್ನನೆ
ಸರ್ವಥಾ ಆಶ್ರಯಿಸಿದಾತನು
ಸರ್ವಕಾಲಂಗಳಲಿ ಮಾಡುತಸರ್ವಕರ್ಮವನು |
ಸರ್ವಥಾ ಎನ್ನಲಿ ಸಮರ್ಪಿಸಿ
ನಿರ್ವಚನದಿಂದೆನ್ನ ಕರುಣದಿ
ಸರ್ವಥಾ ಕೇಡಿಲ್ಲದಿಹ ನಿಜಪದವನೈದುವನು ||

ಮನದಿ ವಚನದಿ ಸಕಲಕರ್ಮವ
ನನವರತವೆನ್ನಲಿ ಸಮರ್ಪಿಸಿ
ವಿನುತಮತ್ಪರನಾಗಿ ಪರತರಬುದ್ಧಿಯೋಗವನು |
ಅನುನಯದಲಾಶ್ರಯಿಸಿ ಬಿಡದನು
ದಿನದೊಳೆನ್ನಲಿ ನಿಲಿಸಿ ಕರಗಿದ
ಮನವನುಳ್ಳವನಾಗು ನೀನೆಂದ ಸುರರಿಪು ನುಡಿದ ||

ಎಲೆಧನಂಜಯ ಎನ್ನೊಳೀ ಪಿರಿ
ದೊಲಿದಡೆಂದುಂ ನಿನ್ನ ಚಿತ್ತವ
ನಿಲಿಸಲೆನ್ನಯ ಕರುಣದಿಂ ಮೋಕ್ಷಕ್ಕೆ ಹಥೆಯಾದ |
ಹಲವು ದುಸ್ತರಮಾದದುರ್ಗಂ
ಗಳ ಗೆಲುವೆ ಯಿಾಮತವ ಹಮ್ಮಿಂ
ಬಲಿದು ಕೇಳದೆ ಮೂರ್ಖನಾಗಿರೆ ಕೆಡುವೆ ನೀನೆಂದ ||

ಎತ್ತಲಾನುಂ ನಿನ್ನ ಹಮ್ಮಿಂ
ದಿತ್ತ ಯುದ್ಧವನೊಲ್ಲೆನೆಂದೇ
ಚಿತ್ತದಲಿ ನೆರೆ ಬಗೆದೆಯಾದೊಡೆ ನಿನ್ನ ಬಗೆ ಬಳಿಕ |
ಸತ್ಯವಾಗದು ತಾಂ ಪ್ರಕೃತಿ ಬೆಂ
ಬತ್ತಿ ನಿನ್ನಿಂ ಬಲಿಪಿನಿಂ ಕೆಡೆ
ಯೊತ್ತಿ ಯುದ್ಧವ ಮಾಡಿಸದೆ ಬಿಡದೆಂದನಸುರಾರಿ ||

ಎಲೆವಿಜಯನೇ ಪ್ರಕೃತಿಯಿಂದವೆ
ನೆಲೆಗೆ ಮುನ್ನವೆ ಜನಿತವಾಗಿಹ
ಬಲಿದ ನಿನ್ನಯ ಕರ್ಮದಿಂದವೆ ಬಿಗಿವಡೆದ ನೀನು |
ಫಲದಲಾವುದ ಮಾಡೆನೆಂದೆನು
ತುಳಿದೊಡಂ ಸ್ವಪ್ರಕೃತಿಯಿಂದದ
ಚಲಿಸಿ ಪರವಶನಾಗಿ ಮಾಡುವೆ ಪಾರ್ಥ ಕೇಳೆಂದ ||

ನಿರುತದಿಂ ಪರಮೇಶ್ವರನು ವಿ
ಸ್ತರದ ಸಚರಾಚರದ ಹೃದಯದ
ಲಿರುತಕರ್ಮದ ಯಂತ್ರದಿಂ ಬಿಗಿವಡೆದು ಬಿದ್ದಿರ್ಪ |
ನೆರೆದ ಭೂತಂಗಳನು ಮಾಯೆಯ
ಪರಿವಿಡಿಯ ವರ್ತನೆಗಳಿಂ ನೆರೆ
ತಿರುಗಿಸುತಲಿಹನನವರತ ಕೇಳೆಂದನಸುರಾರಿ ||

ಆಮಹೇಶನ ಮರೆಯ ಹೊಗು ನೀಂ
ಪ್ರೇಮದಿಂದಲಿ ಸರ್ವಭಾವದೊ
ಳಾಮಹಾತ್ಮನ ದಿವ್ಯಕರುಣಾಮೃತದ ಪರುಷದಲಿ |
ಕ್ಷೇಮದಿಂದಲಿ ಪಡೆದು ಶಾಂತಿಯ
ನಾಮಹಿತಶಾಶ್ವತಪದವನೆಲೆ
ಭೀಮಸೋದರ ನೀನು ಸೇರುವೆಯೆಂದನಸುರಾರಿ ||

ಎಲೆಧನಂಜಯ ಶಾಸ್ತ್ರದೊಳಗಣ
ನೆಲೆಯೆನಿಪ ಸುಜ್ಞಾನವನು ತಾ
ನೊಲಿದು ಪೇಳಿದೆ ಪರಮಸಖ ಬಾಂಧವನು ನೀನೆಂದು |
ಉಳುಹದೊಂದುವ ನಿದರೊಳೆಲ್ಲವ
ನೊಲಿದು ಸಂತತದೊಳು ವಿಚಾರಿಸಿ
ತಿಳಿದು ಬಯಸಿದತೆರದಿ ನೀ ಮಾಡೆಂದನಸುರಾರಿ ||

ಮತ್ತೆ ಕೇಳ್ಳೈ ನೀನೆನಗೆ ಕಡು
ಮಿತ್ರನಾದ ನಿಮಿತ್ತದಿಂ ನಿನ
ಗುತ್ತಮದ ಹಿತವಾದಖಿಲದಿಂ ಗೋಪ್ಯವೆನಿಸು ತಿಹ |
ಸತ್ಯವಹ ವಾಕ್ಯವನು ಕೃಪೆಯಿಂ
ವಿಸ್ತರಿಸುವೆನು ನೀನು ನಿರ್ಮಲ
ಚಿತ್ತದಿಂದವಧರಿಸಿ ಕೇಳಿದನೆಂದನಸುರಾರಿ ||

ಮನವನೆನ್ನಲಿ ನಿಲಿಸು ನೀನನು
ದಿನ ಬಕುತನಾಗೆನ್ನ ಪೂಜಿಸು
ವಿನುತಸಾಷ್ಟಾಂಗಂಗಳಿಂದೆನ್ನನು ಸಮಸ್ಕರಿಸು |
ಇನಿತರಲಿ ನೀನೆನ್ನನೈದುವೆ
ಯೆನಗೆ ನೀಂ ಪ್ರಿಯನಾದುದರಿನೀ
ಘನತರದ ಸತ್ಯಪ್ರತಿಜ್ಞೆಯ ವಿರಚಿಸಿದೆನೆಂದ ||

ಬಿಡು ಸಕಲಧರ್ಮಂಗಳನು ನೀ
ತಡೆಯದೆನ್ನೊಬ್ಬನನೆ ಮರೆಹೊಗು
ಬಿಡಿಸುವೆನು ನಾನಖಿಲಪಾತಕದಿಂದ ನಿನ್ನುವನು |
ಅಡಿಗಡಿಗೆ ಶೋಕವನು ಮಾಡಿದಿ
ರೊಡೆಯನಾನಿರಲಂಜಬೇಡು
ದೊಡಬಡಿಸಿದನು ಕಷ್ಣರಾಯನು ಸುರಪನಂದನನ ||

ನಿನಗೆ ಪೇರ್ದೀಶಾಸ್ತ್ರಸಾರವ
ಮನುಜರೊರ್ತಪ ವಿಲ್ಲದಾತಂ
ಗನುನಯದ ಲೀಶ್ವರನ ಭಕ್ತಿಯದಿಲ್ಲದಾತಂಗೆ |
ವಿನುತಗುರುಸೇವೆಯನೆಸಗದಂ
ಗೆನಗಸೂಯಿಸುತಿರ್ಪ ದುರ್ಮತಿ
ಗಿನಿತನೆಂದುಂ ಹೇಳಲಾಗದು ಪಾರ್ಥ ಕೇಳೆಂದ ||

ಆವನೆನ್ನಲಿ ಪರಮಭಕ್ತಿಯ
ಭಾವವನು ನೆರೆ ಮಾಡಿ ಬಳಿಕತಿ
ಪಾವನೋತ್ತಮಗೋಪ್ಯವೆನಿಪೀಗೀತೆಯನು ಮುದದಿ |
ಆವಪರಿಯಿಂ ದೆನ್ನ ಭಕ್ತಜ
ನಾವಳಿಗೆ ಬೋಧಿಸುವ ಸವನೆ
ನ್ನೀವಿಮಲಪದವೈದುವನು ಸಂದೇಹವಿಲ್ಲೆಂದ ||

ಮನುಜರೊಳಗೀ ಗೀತೆಯನು ಮೇ
ದಿನಿಯೊಳೊಲವಿಂ ಪ್ರಕಟಿಸುವ ಭ
ಕ್ತನು ಕಣಾ ಕೇಳೆನಗತಿಪ್ರಿಯ ಹಿತವನಾಗಿಹನು |
ಎನಗೆ ಕೇಳವನಿಂದತಿಪ್ರಿಯ
ನೆನಿಸುವನು ಬೇರೊಬ್ಬನಿಲ್ಲಾ
ಗನುನಯದಲವನಿಂದ ನಾಸತಿತುಷ್ಟನಹೆನೆಂದ ||

ಆವನೀನಮ್ಮಿಬ್ಬರಿಂ ಸಂ
ಭಾವಿಸಿದ ವರಧರ್ಮಸಂಬೋ
ಧಾವಳಿಯ ನೋದುವನು ತತ್ವಜ್ಞಾನದಾಕ್ರತುವಿಂ |
ಪಾವನೋತ್ತಮನೆನಿಸುವವನಿಂ
ಭಾವದಿಂ ನಾಂ ಯಜಿಸಿಕೊಂಡವ
ನೀವಿಧದಿ ಸಂತುಷ್ಟನಪ್ಪೆನಿದೆನ್ನ ಮತವೆಂದ ||

ದೇವನೆನಿಪೆನ್ನಲ್ಲಿ ಮಾನುಷ
ಭಾವದಿಂದ ಲಸೂಯೆಮಾಡದೆ
ಭಾವಶುದ್ಧಿಯ ಲಾವನೀಗ್ರಂಥವನು ಕೇಳುವನು |
ಆವಿವಿಧಪಾಪಂಗಳನು ತಾಂ
ಸೇವಿಸದೆ ಬಿಡುಗಡೆಪಡೆದು ಶುಭ
ಪಾವನಕ್ರಿಯರುಳ್ಳ ಲೋಕವ ಪಡೆವ್ವನವನೆಂದ ||

ಅಷ್ಟಾದಶಾಧ್ಯಾಯಂ

ವರಧನಂಜಯ ನಿನಗೆ ನಾ ನಿ
ಚ್ಚಿರದಲೊರೆದೀಗೀತೆಯರ್ಥವ
ಹರುಷದಿಂ ದೇಕಾಗ್ರಚಿತ್ತದಿ ಕೇಳಿದೆಯ ನೀನು |
ಹರಿದುದೇನಜ್ಞಾನತಮವೆಂ
ದಿರದೆ ಹರಿ ಪಾರ್ಥನನು ಘನನಂ
ಗರದೊಳಗೆ ಬೆಸಗೊಂಡನೆಲೆಧೃತರಾಷ್ಟ್ರ ಕೇಳೆಂದ ||

ದೇವ ಬಿನ್ನಹ ನಿಮ್ಮ ಕಾರು
ಣ್ಯಾವಲೋಕನದಿಂದಲೆನ್ನಗು
ಣಾವಲಂಬನದಜ್ಞತನ ನೆರೆ ಕೆಟ್ಟುದದರಿಂದ |
ಜೀವಭಾವವನುಳಿದು ನಿಜ ಸಂ
ಭಾವಿಸಿತು ಸಂದೇಹ ಬೀತುದು
ದೇವ ನೀ ಹೇಳಿದುದ ಮಾಡುವೆನೆಂದನಾಪಾರ್ಥ ||

ಈಪರಿಯಲಿ ಮಹಾತ್ಮನೆನಿಪಾ
ಶ್ರೀಪತಿಯ ಪಾರ್ಥನ ಮಹಾದ್ಭುತ
ರೂಪವಹ ರೋಮಾಂಚನದ ಸಂವಾದವನು ನಾನು |
ಭೂಪ ಕೇಳಿದೆನೆಂದು ಸಂಜಯ
ನೀಪರಿಯೊಳೆನುತಿರ್ದನು ಕುರು
ಭೂಪ ಕೇಳ್ನೀನೆಂದು ವೈಶಂಪಾಯನನು ನುಡಿದ ||

ವ್ಯಾಸಪರಮರ್ಷಿಪ್ರಸಾದದಿ
ಲೇಸೆನಿಪ ನೆರೆ ಗೋಪ್ಯವೆನಿಸಿ
ರ್ಪೀಸಕಲಶಾಸ್ತ್ರಾರ್ಥಯೋಗವ ಯೋಗಪತಿಯೆನಿಪಾ |
ವಾಸುದೇವನೆ ತನಗೊಲಿದನಹ
ವಾಸವಾತ್ಮಭವಂಗೆ ಮನವೊಲಿ
ದೀಸನೊರೆದುದ ಕೇಳ್ದೆನಾಂ ಧೃತರಾಷ್ಟ್ರ ಕೇಳೆಂದ ||

ಕೇಳು ಧೃತರಾಷ್ಟ್ರಾವನಿಪ ಗೋ
ಪಾಲಕೃಷ್ಣಂಗರ್ಜುನಂಗೆಯು
ಮೇಳವಿಸಿದತಿಪುಣ್ಯಸಂವಾದದ ಮಹಾದ್ಭುತವ |
ಕೇಳಿ ನೆನೆನೆನೆದಡಿಗಡಿಗೆ ಮನ
ದೇಳಿಗೆಯು ಸಂತೋಷವನು ಸೆರೆ
ತ್ತಾಳಿದೆನು ನಾನೆಂದು ಸಂಜಯ ನೊರೆದನೊಲವಿನಲಿ ||

ಅರಸ ಕೇಳೈ ವಾಸುದೇವನು
ಪರಮಹಾದ್ಭುತವೆನಿಸೆ ತೋರಿದ
ಪಿರಿದೆನಿಸಿದಾವಿಶ್ವರೂಪವ ಬಿಡದೆ ನೆನೆನೆನೆದು |
ಇರದೆನಗೆ ಬೆರಗಾಗುತಿದೆ ವಿ
ಸ್ತರಿಸಿ ಕೇಳೆನಗಡಿಗಡಿಗೆ ಘನ
ಹರುಷವುದಯಿಪುದೆಂದು ಮುದದಲಿ ಸಂಜಯನು ನುಡಿದ ||

ಎಲ್ಲಿ ಯೋಗಂಗಳಿಗೊಡೆಯನಹ
ಸ್ಸಲ್ಲಲಿತ ನಾಕೃಷ್ಣನಿಹನಿ
ನ್ನೆಲ್ಲಿ ಧನುವನು ಧರಿಸಿಕೊಂಡರ್ಜುನನು ನೆಲಸಿಹನು |
ಅಲ್ಲಿಹಳು ವರಲಕ್ಷ್ಮಿ ಜಯಸಿರಿ
ಯಲ್ಲಿ ಪರಮೈಶ್ವರ್ಯನೀತಿಗ
ಳಲ್ಲಿ ನೆಲಸಿಹುವೆನ್ನ ಮತ ಧೃತರಾಷ್ಟ್ರ ಕೇಳೆಂದ ||

ಕೇಳು ಜಯಮೇಜಯ ಧರಿತ್ರೀ
ಪಾಲ ಕುರುಭೂಮಿಯಲಿ ಕೃಷ್ಣಕೃ
ಪಾಳುಫಲ್ಗುನರುಭಯಸೇನೆಯ ಮಧ್ಯದಲಿ ರಥದಾ |
ಮೇಲೆ ಸಂವಾದಿಸಿದ ಧರ್ಮವ
ಹೇಳಿದನು ಸಂಜಯನು ಕುರುಭೂ
ಪಾಲಧೃತರಾಷ್ಟ್ರಂಗೆ ಹರುಷದಲೆಂದು ಮುನಿ ನುಡಿದ ||

|| ಇಂತು ಮೋಕ್ಷಯೋಗವೆಂಬ ಅಷ್ಟಾದಶಾಧ್ಯಾಯಂ ಸಂಪೂರ್ಣಂ ||

ಇಂತು ಕರ್ಣಾಟಕ ಭಗವದ್ಗೀತೆ ಮುಗಿದುದು.

ಶ್ರೀಕೃಷ್ಣಾರ್ಪಣಮಸ್ತು